ವೀರರಾಣಿ

# ಕೆಳದಿಯ ಚೆನ್ನಮ್ಮ

(ಚಾರಿತ್ರಿಕ ಕಾದಂಬರಿ)

ಲಕ್ಕಪ್ಪ ಅ. ಶಿರಹಟ್ಟಿ

೧೯೭೮

ಪ್ರಕಾಶನ :

ಅರುಣೋದಯ ಪ್ರಕಾಶನ
ಬಸವ ಭವನ, ತೊರವಿ ತಾ. ವಿಜಾಪೂರ.

ಹಕ್ಕುಗಳು : ಲೇಖಕರವು

ಪ್ರತಿಗಳು : ೧೦೦೦

ಬೆಲೆ : ಮೂರು ರೂಪಾಯಿ

ಮುದ್ರಕರು :

ಸದಾನಂದ ಪ್ರಿಂಟರ್ಸ್,
ಹಳೆಯ ದಲಾಲ ಮಾರ್ಕೆಟ, ಧಾರವಾಡ.

# ಮುನ್ನುಡಿ

ಶರಣ ಜೀವನ ನಡೆಸುತ್ತಿರುವ ಹಿರಿಯ ಅಣ್ಣಂದಿರಾದ ಶ್ರೀ ಲಕ್ಕಪ್ಪ ನವರು ಬಹಳ ದಿನಗಳಿಂದ ಸಾಹಿತ್ಯಸೇವೆ ಮಾಡುತ್ತಬಂದಿದ್ದಾರೆ. "ಬಸವರಾಜದೇವರು", "ಕ್ರಾಂತಿಗಂಗೋತ್ರಿ" ಮೊದಲಾದ ಗ್ರಂಥಗಳನ್ನು ರಚಿಸಿ ಕನ್ನಡಿಗರ ಪ್ರೀತಿಗೆ ಪಾತ್ರರಾಗಿದ್ದಾರೆ. ಪುರಾಣಗಳ ಪವಾಡಗಳಲ್ಲಿ ಮಿಂಚಿಮಾಯವಾದ ಅಕ್ಕನಾಗಲಾಂಬಿಕೆಯನ್ನು ಕುರಿತು "ಕ್ರಾಂತಿಗಂಗೋತ್ರಿ" ಗ್ರಂಥ ರಚಿಸಿದ್ದಾರೆ. ಸಂಶೋಧನಾತ್ಮಕವಾಗಿ ರಚಿಸಿದ ಆ ಗ್ರಂಥ ಅಕ್ಕ ನಾಗಮ್ಮನ ಜೀವನದ ಮೇಲೆ ಹೊಸಬೆಳಕನ್ನು ತೋರಿದೆ.

ಇದೀಗ ಕೆಳದಿಯ ವೀರರಾಣಿ ಚೆನ್ನಮ್ಮನನ್ನು ಕುರಿತು ಕಿರುಹೊತ್ತಿಗೆ ಯನ್ನು ರಚಿಸಿದ್ದಾರೆ. ಇಳಿವಯಸ್ಸಿನಲ್ಲಿ, ಕಣ್ಣಿನತೊಂದರೆ ಇರುವಾಗ ಅದಾವುದನ್ನು ಲೆಕ್ಕಿಸದೆ ಐತಿಹಾಸಿಕ, ಸತ್ಯ ಸಂಗತಿಗಳನ್ನೆಲ್ಲ ಸಂಗ್ರಹಿಸಿ ರಚಿಸಿದ ಕೆಳದಿ ಚೆನ್ನಮ್ಮ ! ಗ್ರಂಥವು ಕನ್ನಡತಿಯರಿಗೆ ಸ್ಫೂರ್ತಿದಾಯಕ ವಾಗಿದೆ.

ವಿಶಾಲ ಹೃದಯದ ಕನ್ನಡಿಗರಿಗೆ ಪರಪ್ರಾಂತಗಳ, ಪರರಾಷ್ಟ್ರಗಳ ವೀರ ಮಹಿಳೆಯರ, ಆಧ್ಯಾತ್ಮಜೀವಿಗಳ ಪರಿಚಯವಿರುತ್ತದೆ. ಆದರೆ ನಮ್ಮ ನಾಡಿನ ಜನರನ್ನು, ನಮ್ಮನಾಡಿಗಾಗಿ ತ್ಯಾಗಮಾಡಿದವರನ್ನು ನಾವು ಮರೆಯುತ್ತಿದ್ದೇವೆ. 'ಹಿತ್ತಲ ಗಿಡ ಮದ್ದಲ್ಲ' ಎಂಬುದನ್ನು ನಾವಿಂದು ನೋಡುತ್ತಿದ್ದೇವೆ. ಆದರೆ ನಮ್ಮ ನಾಡಿನ ಅಭಿವೃದ್ಧಿಗೆ, ನಮ್ಮ ಜನರ ಕಲ್ಯಾಣಕ್ಕೆ ಹೋರಾಡಿದ ಪುಣ್ಯಜೀವಿಗಳ ನೆನಪಿನಿಂದ ನಾವಿಂದು ಸ್ಫೂರ್ತಿ ಪಡೆಯಬೇಕಾಗಿದೆ. ಈ ದಿಸೆಯಲ್ಲಿ 'ವೀರರಾಣಿ ಕೆಳದಿ ಚೆನ್ನಮ್ಮ' ಒಂದು ಉಪಯುಕ್ತ ಗ್ರಂಥವಾಗಿದೆ.

ವಿಜಯನಗರದ ಪತನದ ನಂತರ, ಆ ಸಾಮ್ರಾಜ್ಯದ ಪರಂಪರೆಯನ್ನು ಉಳಿಸಿಕೊಂಡು ಬಂದ ಕೆಳದಿ ಅರಸು ಮನೆತನ ಶೌರ್ಯ ಸಾಹಸಗಳ ಪ್ರತೀಕ ವಾಗಿದೆ. ಕೆಳದಿಯ ಶಿವಪ್ಪನಾಯಕನ ಶಿಸ್ತಿನ ರಾಜ್ಯಭಾರ ಕರ್ನಾಟಕದ ಇತಿಹಾಸದಲ್ಲಿ ಹಿರಿಯಸ್ಥಾನ ಪಡೆದಿದೆ. ಆ ಶಿವಪ್ಪನಾಯಕನ ಕಿರಿಯಸೊಸೆ ಚೆನ್ನಮ್ಮಾಜಿ ಸ್ವಾಭಿಮಾನದ ಮೂರ್ತಿ. ದಕ್ಷ ಆಡಳಿತಗಾರ್ತಿ, ವೀರ

ಯೋಧಳು, ಧರ್ಮ, ಸಂಸ್ಕೃತಿಯ ಸಂವರ್ಧಕಳು, ವೀರಕನ್ನಡತಿ ಚೆನ್ನಮ್ಮನ ಜೀವನಚಿತ್ರವನ್ನು ಶ್ರೀ ಲಕ್ಕಪ್ಪನವರು ಸೊಗಸಾಗಿ ಚಿತ್ರಿಸಿದ್ದಾರೆ.

ಚೆನ್ನಮ್ಮ ಪತಿಯ ಮರಣಾನಂತರ, ಭುವನಗಿರಿಯ ಅರಮನೆಯಲ್ಲಿ ರಾಜ್ಯಾಭಿಷಿಕ್ತಳಾದಳು. ವೈರಿಗಳು ಯುದ್ಧದಲ್ಲಿ ಚೆನ್ನಮ್ಮಾಜಿಯ ಪತಿ ಸೋಮಶೇಖರ ನಾಯಕನನ್ನು ವಂಚನೆಯಿಂದ ಕೊಲೆಗೈದಾಗ ಚೆನ್ನಮ್ಮ ರಣ ಚಂಡಿಯಂತೆ ರಣಾಂಗಣಕ್ಕಿಳಿದು ವಿಜಾಪುರದ ಆದಿಲಶಾಹಿಯ ದಂಡಿನ ಸಹಾಯ ಪಡೆದು ಯುದ್ಧಹೂಡಿದ ಜಿನ್ನೋಪಂತನನ್ನು ಸೋಲಿಸಿ ಓಡಿಸಿ ದಳು. ಶಿವಾಜಿಯ ಮಗ ರಾಜಾರಾಮನಿಗೆ ಮೊಗಲ ಔರಂಗಜೇಬನ ವಿರುದ್ಧ ಆಶ್ರಯವನ್ನಿತ್ತಳು. ಬಲಾಢ್ಯ ಮೊಗಲರ ವಿರುದ್ಧ ಹೋರಾಡಿ ಅವನಿಗೆ ರಕ್ಷಣೆಯನ್ನೊದಗಿಸಿದಳು. ಆಶ್ರಯ ಬೇಡಿದವರಿಗೆ ಆಶ್ರಯವನ್ನೀ ಯುವ ಕನ್ನಡಿಗರ ಹಿರಿಯ ಪರಂಪರೆಯನ್ನುಳಿಸಲು ರಾಜ್ಯವನ್ನೇ ಪಣವಾಗಿ ರಿಸಿ ಹೋರಾಡಿ ಜಯಶಾಲಿಯಾದಳು. ಬಸಪ್ಪನಾಯಕನನ್ನು ದತ್ತುಪಡೆದು ಆತನಿಗೆ ಯೋಗ್ಯಶಿಕ್ಷಣ ಕೊಡಿಸಿ ಕೆಳದಿಯ ರಾಜ್ಯಭಾರ ಸರಿಯಾಗಿ ನಡೆಯು ವಂತೆ ನೋಡಿಕೊಂಡಳು. ಹೆಣ್ಣುಮಗಳು ಆಳುತ್ತಿರುವ ರಾಜ್ಯವನ್ನು ಕಬಳಿಸಬೇಕೆನ್ನುವ ವೈರಿಗಳನ್ನೆಲ್ಲ ಸದೆಬಡಿದಳು. ತನ್ನ ರಾಜ್ಯದಲ್ಲಿ ಜನ ಸೌಖ್ಯದಿಂದ, ಬಾಳುವಂತೆ ರಾಜ್ಯಾಡಳಿತ ನಡೆಸಿದ ಕನ್ನಡಿಗರ ಅಭಿಮಾನದ 'ಕೆಳದಿ ಚೆನ್ನಮ್ಮ' ಗ್ರಂಥ ಕನ್ನಡಿಗರ ಪ್ರೀತಿಗೆ ಪಾತ್ರವಾಗಬಲ್ಲದು.

ಶ್ರೀ ಲಕ್ಕಪ್ಪನವರ ಮಾಗಿದ ಅನುಭವ, ಸಂಶೋಧನೆಗಳ ಫಲವಾಗಿ ರೂಪುಗೊಂಡ ಈ ಗ್ರಂಥಕ್ಕೆ ನಾನು ಮುನ್ನುಡಿಯ ಮಾಲೆಯನ್ನು ಒದಗಿಸ ಬೇಕೆಂದು ಕೋರಿದ್ದಾರೆ. ಅವರ ಲೆಕ್ಕಣಿಕೆಯಿಂದ ರೂಪುಗೊಂಡ "ಕೆಳದಿ ಚೆನ್ನಮ್ಮ" ಕನ್ನಡಿಗರ ಮನೆಯನ್ನು, ಮನವನ್ನು ಪ್ರವೇಶಿಸಲಿ. ಅವರ ಸ್ವಾಭಿಮಾನ ಜಾಗೃತವಾಗಲಿ ಎಂದು ಹಾರೈಸುವೆ. ಶ್ರೀ ಲಕ್ಕಪ್ಪನವರಿಂದ ಇನ್ನೂ ಹಲವಾರು ಗ್ರಂಥಗಳು ರೂಪುಗೊಳ್ಳಲಿ.

ಪ್ರಶಾಂತ
೪-೧೦-೧೯೭೮

**ಶಾಂತಾದೇವಿ ಮಾಳವಾಡ**

# ಚೆನ್ನುಡಿ

ಎಪ್ಪತ್ತರ ಇಳಿವಯಸ್ಸಿನಲ್ಲಿ ಅನಾರೋಗ್ಯದ ವಿಪರೀತ ಪರಿಸ್ಥಿತಿಯಲ್ಲಿ ಶ್ರೀಲಕ್ಕಪ್ಪ ಶಿರಹಟ್ಟಿಯವರು 'ವೀರರಾಣಿ ಕೆಳದಿ ಚೆನ್ನಮ್ಮ'ವೆಂಬ ಉತ್ಕೃಷ್ಟ ಚಾರಿತ್ರಿಕ ಕಿರುಕಾದಂಬರಿಯನ್ನು ಕನ್ನಡಿಗರ ಮುಂದಿಟ್ಟಿದ್ದಾರೆ. ಅವರ ನಾಡಾಭಿಮಾನ; ಭಾಷಾಭಿಮಾನಕ್ಕೆ; ಇದಕಿಂತ ಹೆಚ್ಚಿನ ನಿದರ್ಶನಬೇಕಿಲ್ಲ! ವೀರಶೈವ ಪ್ರಖ್ಯಾತ ರಾಜಮನೆತನಗಳಲ್ಲಿ ಕೆಳದಿಗೆ ಒಂದು ಪ್ರಮುಖ ಸ್ಥಾನವಿದೆ. ಅಖಂಡ ೨೭೦ ವರುಷಗಳವರೆಗೆ ವಿಜೃಂಭಣೆಯಿಂದ ಬೆಳಗಿದ ಸ್ವತಂತ್ರ ರಾಜ್ಯವಿದು. ಪ್ರಬಲ ವಿರೋಧ ಶಕ್ತಿ ಅಡ್ಡಗಟ್ಟಿ ನಿಂತರೂ ತಮ್ಮ ಶೌರ್ಯ-ಧೈರ್ಯ-ಸಾಹಸಗಳ ಮೂಲಕ ಅವುಗಳನ್ನು ಕೊಚ್ಚಿ ಹಾಕಿ ಮೆರೆತರೂ ಮರೆಯುವಾಗದ ರಾಜ್ಯವದು. ಹೆಚ್ಚೇನು; ಮೈಸೂರ ಅರಸರೇ ನುಂಗಿ ನೊಣೆಯಬೇಕೆಂದು ಹೊಂಚಹಾಕಿದ್ದರು! ಇಂದಿಗೂ ಮನೆಗೆ ಮಾರಿ; ಪರರಿಗುಪಕಾರಿಗಳಲ್ಲವೇ ನಾವು! ಶಿಸ್ತಿನ ಶಿವಪ್ಪನಾಯಕ ರಾಜ್ಯದ ಭದ್ರಬುನಾದಿಯಾದರೆ; ಚೆನ್ನಮ್ಮ ಅದರ ಕೀರ್ತಿಕಲಶ. ಶೌರ್ಯದಲ್ಲಿ, ಧೈರ್ಯದಲ್ಲಿ, ಸ್ವಾಭಿಮಾನದಲ್ಲಿ, ದೂರದೃಷ್ಟಿಯಲ್ಲಿ, ಧರ್ಮಾಚರಣೆಯಲ್ಲಿ, ರಾಜ್ಯ ಕಾರ್ಯೋದ್ಯೋಗದಲ್ಲಿ, ಸಮದೃಷ್ಟಿಯಲ್ಲಿ ಕೆಳದಿಯ ಚನ್ನಮ್ಮನಿಗೆ ಸರಿಹೋಗುವ ರಾಣಿಯು ಸಿಕ್ಕುವರು ದುರ್ಲಭ. ನಮ್ಮನಾಡಿನ ರಾಜಕೀಯ ಚರಿತ್ರೆಯಲ್ಲಿ ಕೆಳದಿಯ ಇತಿಹಾಸ ಸುವರ್ಣಾಕ್ಷರಗಳಿಂದ ಬರೆಯಲ್ಪಟ್ಟಿದೆ. ಚೆನ್ನಮ್ಮನು ಸ್ವಾರ್ಥ ಸಾಧಕರ ಕುಹಕಿಗಳ ಕಪಟಕಾರಸ್ಥಾನಕ್ಕೆ ಬಲಿಯಾಗಿ ಪತಿಯು ಕೊಲ್ಲಲ್ಪಟ್ಟರೂ ಸಹ ಕಂಗೆಡದೆ ವೀರಯೋಧಳಾಗಿ ಕೈಯಲ್ಲಿ ಕತ್ತಿ ಹಿಡಿದು ಅಶ್ವಾರೂಢಳಾಗಿ ವೈರಿಗಳ ರುಂಡವನ್ನು ಚಂಡಾಡಿ ರಣಚಂಡಿ-ಯಾಗಿ ನಿಂತು ರಾಜ್ಯವನ್ನು ರಕ್ಷಿಸಿದಳು; ಪೋಷಿಸಿದಳು. ಮರಾಠರ ರಾಜಾ-ರಾಮನಿಗೆ ಆಶ್ರಯ ನೀಡಿದ ಮಹಾಮಾತೆ. ಆಕೆಯ ವಿರೋಚಿತ ಅಗಮ್ಯ ಸಾಹಸದ ಕಾರ್ಯಗಳು ರೋಮಾಂಚಕವಾಗಿವೆ; ಚಿಕ್ಕದಾದರೂ ಚೊಕ್ಕದಾದ ಈ ಕಿರುಕೃತಿಯಲ್ಲಿ ಇತಿಹಾಸವಿದೆ, ಚರಿತ್ರೆಯಿದೆ, ಸಂಸ್ಕೃತಿವಿದೆ. ಕನ್ನಡ ಮಹಿಳೆಯ ವೀರಶ್ರೀಯಿದೆ; ವಿನಯಶ್ರೀಯಿದೆ. ಭಕ್ತಿನಿಷ್ಠೆಯಿದೆ. ವೀರ್ಯವತ್ತಾದಶೈಲಿ, ರಸವತ್ತಾದ ನಿರೂಪಣೆ, ಸರಳ ಭಾಷೆಯ ತ್ರಿಕೂಟ ದಲ್ಲಿ ಮೂಡಿಬಂದ ಈ ಕೃತಿಯನ್ನು ಓದುದದೇ ಒಂದುರಸಗಳಿಗೆ!

ಎಸ್. ಎಸ್. ಭೂಸರಡ್ಡಿ

ಪಠ್ಯಪುಸ್ತಕ ನಿರ್ದೇಶನಾಲಯ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ-೩

# ಲೇಖಕರ ಎರಡು ನುಡಿಗಳು

ಕನ್ನಡ ನಾಡಿನ ಇತಿಹಾಸದಲ್ಲಿ ಕೆಳದಿಯ ರಾಜವಂಶತನಕ್ಕೆ ವಿಶೇಷವಾದ ಸ್ಥಾನಮಾನಗಳಿವೆ. ಅದರ ಅರಸರು ಬಾಹುಬಲ, ಬುದ್ಧಿಬಲ, ಧರ್ಮಾಸಕ್ತಿಗಳಿಂದ ಭಾರತ ರಾಷ್ಟ್ರಾದ್ಯಂತ ಪ್ರಸಿದ್ಧಿಯನ್ನು ಪಡೆದರು. ಸಂಪತ್ಸಮೃದ್ಧ ರಾಜ್ಯವನ್ನು ಕಟ್ಟಿ ಆಳಿದರು. ಇವರು ವೀರಶೈವ ಮತದವರಾದರೂ ಸರ್ವ ಮತ-ಪಂಥಗಳನ್ನು ಮನ್ನಿಸಿ, ಗೌರವಿಸಿ, ಪೋಷಿಸಿದರು. ಈ ಕೆಳದಿಯ ನಾಯಕರು ಗಳಿಸಿದ ಕೀರ್ತಿಗೆ ಹದಿಮೂರನೆಯ ಪಟ್ಟದ ಅರಸಿ ಚೆನ್ನಮ್ಮಾಜಿ ಕಳಸವಿಟ್ಟಳು.

ಲಿಂಗಕವಿ ವಿರಚಿತ 'ಕೆಳದಿನೃಪವಿಜಯ' ಕಾವ್ಯವು ಆ ರಾಜಮನೆತನದ ೨೭೦ ವರ್ಷಗಳ ಚರಿತ್ರೆಯನ್ನು ವಿವರವಾಗಿ ಹೇಳುತ್ತಿದೆ. ದೊರೆಗಳ ಬಳಗದ ಹಾಗು ಆಡಳಿತಕ್ಕೆ ಸಂಬಂಧಿಸಿದ ಎಲ್ಲರ ಹೆಸರನ್ನೂ ತಿಳಿಸುತ್ತಿದೆ. ಕರ್ನಾಟಕದ ಗತವೈಭವದ ಬಗೆಗೆ ನನಗೆ ಅಭಿಮಾನ! ಪೂರ್ವ ವಯಸ್ಸಿನಲ್ಲಿಯೇ ಆ ಕಾವ್ಯವನ್ನು ಓದಿದ್ದೆ. ಮೂರನೆಯ ಅರಸು ದೊಡ್ಡ ಸಂಕಣ್ಣನಾಯಕನನ್ನು ಕುರಿತು ಲಾವಣಿ ರಚಿಸಿ ಹಾಡಿಸಿದ್ದೆ. ೭ನೆಯ ದೊರೆ ವೀರಭದ್ರನಾಯಕನನ್ನು ಕುರಿತು ಚಿಕ್ಕ ಕಾದಂಬರಿ ಬರೆದಿದ್ದೆ. ಹಲವು ವರ್ಷಗಳ ನಂತರ 'ಬಯಲಾದ ಸಂಚು' ಹೆಸರಿನಿಂದ ಆ ಹೊತ್ತಿಗೆಯು ಶ್ರೀ ಸಿಂಪಿ ಲಿಂಗಣ್ಣನವರ ಅರವಿಂದ ಗ್ರಂಥಮಾಲೆಯಲ್ಲಿ ಬೆಳಕು ಕಂಡಿತು.

ಇದೀಗ ಆ ರಾಜಮನೆತನದ ಶಿಸ್ತಿನ ಶಿವಪ್ಪನಾಯಕ. ಚೆನ್ನಮ್ಮಾಜಿ ಮುಂತಾದವರ ನೆನಪು ಮರುಕಳಿಸಿ ಮತ್ತೆ ಆ ಕಾವ್ಯವನ್ನು ಓದಿದೆ. ಮನಸ್ಸಿನಲ್ಲಿ ಮೂಡಿಬಂದಿತು ಈ ಮಾತು :

'ದೇಶದಲ್ಲಿ ರಾಜಕೀಯ ಕೋಲಾಹಲವಿರುವ ಕಾಲದಲ್ಲಿ–ಅತಿ ಕ್ಲಿಷ್ಟಕರವಾದ ಹಲವು ಸಮಸ್ಯೆಗಳ ಮಧ್ಯದಲ್ಲಿ–ಇಪ್ಪತ್ತೈದು ವರ್ಷಕ್ಕೆ ಮಿಕ್ಕಿದ

ದೀರ್ಘಕಾಲ, ಒಂದು ಸ್ವತಂತ್ರ ರಾಜ್ಯವನ್ನು ಕುಂದಿಲ್ಲದೆ ಆಳಿದ ಮಹಿಳೆ, ಚೆನ್ನಮ್ಮಾಜಿ ಒಬ್ಬಳಲ್ಲದೆ ಮತ್ತೊಬ್ಬಳಿಲ್ಲ !

ಇದು ಸತ್ಯವಾದ ಮಾತು ! ಕನ್ನಡಿಗರಿಗೆ ವಿಶೇಷವಾಗಿ ಕನ್ನಡ ಮಹಿಳೆಯರಿಗೆ ಅಭಿಮಾನದ ಮಾತು ! ಇದುವೇ ಆಕೆಯನ್ನು ಕುರಿತು ಬರೆಯಲು ಪ್ರೇರಣೆ ನೀಡಿತು; ಬರೆದೆ. ಹಲವು ಕಾರಣಗಳಿಂದ ಈ ಹೊತ್ತಿಗೆಯನ್ನು ಚಿಕ್ಕದಾಗಿಸಬೇಕಾಯಿತು. ಚರಿತ್ರ ನಾಯಿಕೆ ತುಂಬ ಸತ್ವಶಾಲಿನಿ. ಈ ಚಿಕ್ಕಕೃತಿ 'ಕನ್ನಡಿಯಲ್ಲಿ ಮೇರುವನ್ನು' ತೋರಿಸಿದಂತಿದೆ. ಓದುವವರು ಹೆಚ್ಚಿನದನ್ನು ಊಹಿಸಿ ಭಾವಿಸುವರೆಂದು ಹಾರೈಸುವೆ. ಆಧಾರಗ್ರಂಥ : ಕೆಳದಿ ನೃಪವಿಜಯ. ಅದರ ಸಂಪಾದಕರಿಗೆ ಋಣಿಯಾಗಿರುವೆ.

## –ಕೃತಜ್ಞತೆ–

ಮಿತ್ರ ಬಂಧು ಶ್ರೀ ಎಸ್. ಎಸ್. ಭೂಸರಡ್ಡಿ M.A.,B.Ed. ಅವರು ಹಸ್ತಪ್ರತಿಯನ್ನು ಪರಿಶೀಲಿಸಿ ಪ್ರಕಟಿಸಲು ಪ್ರೋತ್ಸಾಹಿಸಿದರು. ಅಚ್ಚು ಹಾಕಿಸುವದಕ್ಕೆ ಸಂಬಂಧಿಸಿದ ಕಾರ್ಯಗಳನ್ನೆಲ್ಲ ಪರಿಶ್ರಮ ಪೂರ್ವಕ ನಿರ್ವಹಿಸಿದರು. ಚರಿತ್ರೆಯ ಅಭಿವ್ಯಕ್ತಿಗಾಗಿ ಸದಭಿಪ್ರಾಯದ ಲೇಖನವೊಂದನ್ನು ಬರೆದು ಕಳಿಗೊಳಿಸಿದರು. ಇವರಿಗೆ ನನ್ನ ಅನಂತ ಕೃತಜ್ಞತೆಗಳು ಸಲ್ಲುವವು. ಅಲ್ಪಾವಧಿಯಲ್ಲಿ ನಮ್ಮ ನಾಡಿನ ಖ್ಯಾತ ಕಲಾವಿದ ಶ್ರೀ ಜಿ. ಕೆ. ಮೂರ್ತಿಯವರು ಸುಂದರವಾದ ಮುಖಚಿತ್ರ ಬರೆದಿದ್ದಾರೆ. ಅವರಿಗೂ ನಮ್ಮ ನಮನಗಳು.

ಈ ಚಿಕ್ಕ ಕೃತಿಗೆ ಸುಂದರವಾದ ಮುನ್ನುಡಿ ಬರೆದು ಅಲಂಕರಿಸಿ, ಕನ್ನಡಿಗರ–ಕನ್ನಡ ಸೋದರಿಯರ–ಅಭಿಮಾನದ ಉಡಿಗೆ ನೀಡಿದ, ಮನ್ನಣೆವೆತ್ತ ಸಾಹಿತ್ಯ ಶರಣೆ, ತಾಯಿ, ಶ್ರೀಮತಿ ಶಾಂತಾದೇವಿ ಮಾಳವಾಡ ಅವರಿಗೆ ನಮನಗಳು.

ಮೆಚ್ಚಾಗುವಂತೆ ಅಚ್ಚುಹಾಕಿದ ಸದಾನಂದ ಪ್ರಿಂಟರ್ಸ, ಧಾರವಾಡ ಅವರಿಗೆ ನನ್ನ ನೆನಕೆಗಳು.

ತೊರವಿ

ಲಕ್ಕಪ್ಪ ಅ. ಶಿರಹಟ್ಟಿ

ಆಶ್ವಿನ ಶು. ೧ (೩-೧೦-೧೯೭೮)

# ಪರಿವಿಡಿ



## ತಿದ್ದುಪಡಿ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೭ | ೧೦ | ವಿವರಿಸುವದಲ್ಲಿ | ವಿಹರಿಸುವದರಲ್ಲಿ |
| ೭ | ೧೧ | ಮಾವುತನ | ಮಾವುತನು |
| ೧೫ | ೧೪ | ಮನೆದಲ್ಲಿ | ಮನೆತನದಲ್ಲಿ |
| ೧೮ | ೧೫ | ವಿವಾಹರವನಕ್ಕೆ | ವಿಹಾರವನಕ್ಕೆ |
| ೧೯ | ೧೯ | ಸ್ವಾಮಿ?" | ಸ್ವಾಮೀ" |
| ೨೨ | ೨೬ | ಅವಸ್ಥೆ | ಅವ್ಯವಸ್ಥೆ |
| ೨೯ | ೧೨ | ನಷ್ಟವನ್ನು | ನಷ್ಟವನ್ನು ತಂದ |
| ೨೯ | ೨೧ | ನಾಯಂಕ | ನಾಯಂಕನ |
| ೩೧ | ೧೩ | ನಾಯಂಕನ | ನಾಯಕ |
| ೩೨ | ೬ | ಅಂಗಸ್ತೋತ್ರ | ಲಿಂಗಸ್ತೋತ್ರ |
| ೩೨ | ೭ | ಅಂಗಾನುಷ್ಠಾನ | ಲಿಂಗಾನುಷ್ಠಾನ |
| ೫೪ | ೨೩ | ಮಾಡದು | ಮಾಡಲು |

ವಿ.ಸೂ. : ೧೩ನೆಯ ಪುಟದ ೧೨ನೆಯ ಸಾಲಿನ 'ಮಾರ್ಗಗಳನ್ನು' ಇದರ ಮುಂದೆ 'ಕಟ್ಟಿ ಮಲೆನಾಡಿನ ಕಣಿವೆಗಳಲ್ಲಿ ತಡೆಹಿಡಿದು ವೈರಿಗಳ ಪಡೆಗಳನ್ನು' ಎಂಬುದನ್ನು ಸೇರಿಸಿ ಓದಬೇಕು.

# ೧. ಚಿಕ್ಕ ಸೊಸೆ

ದಿವಾಣಖಾನೆಯಲ್ಲಿ ಓಲಗದ ಕಾರ್ಯ ಪೂರೈಸಿ, ಮಂತ್ರಿ-ಮನ್ನೆಯರನ್ನು ಅಧಿಕಾರಿಗಳನ್ನು ಬೀಳ್ಕೊಟ್ಟು, ಶಿವಪ್ಪನಾಯಕನು ಸಿಂಹಾಸನದ ಬದಿಯ ಬಾಗಿಲಿನಿಂದ ಒಳಗಡೆಗೆ ನಡೆದನು. ಅವನು ಮುಂದಡಿಯಿಡುತ್ತಿದ್ದಂತೆ ತನ್ನ ಬಲಗಡೆಯ ಬಾಗಿಲೊಂದರಲ್ಲಿ ಒಬ್ಬ ಯುವತಿ ಹಿಂದೆ ಸರಿದು ಬಾಗಿಲ ಮೂಲೆಯಲ್ಲಿ ಮರೆಯಾಗುತ್ತಿದ್ದುದನ್ನು ಕಂಡನು. ಅವನು ಒಂದು ಹೆಜ್ಜೆ ಹಿಂದೆ ಇಟ್ಟು 'ಇಲ್ಲಿ ಇದ್ದವರು ಯಾರು ?' ಎಂದು ಗಟ್ಟಿಸಿ ಕೇಳಿದನು. ಕೂಡಲೆ ಆ ಯುವತಿ ಈಚೆಗೆ ಬಂದು ನಾಯಕನಿಗೆ ನೆಲಮುಟ್ಟಿ ವಂದಿಸಿದಳು. ಶಿವಪ್ಪ ನಾಯಕನು ನೋಡಿದನು.

"ಓ, ಚೆನ್ನಮ್ಮಾಜಿ ! ಯಾಕಮ್ಮಾ ನೀನು ಇಲ್ಲಿ ?

ಚೆನ್ನಮ್ಮ ತಲೆ ತಗ್ಗಿಸಿ, ಬೆರಳಲ್ಲಿ ಸೆರಗಿನ ಕೊನೆ ತೀಡುತ್ತ ಮೆಲ್ಲನೆ ನುಡಿದಳು:

"ಓಲಗದ ಕಾರ್ಯಕಲಾಪ ತಿಳಿಯಲು ಬಂದು ಇಲ್ಲಿ ಮರೆಯಲ್ಲಿದ್ದೆನು."

"ಓಹೋ, ಹೀಗೆ ಆಗಾಗ ಬರುತ್ತಿರುತ್ತೀಯೇನು ?" ನಾಯಕನ ದನಿ ಮೆದುವಾಗಿತ್ತು, ಮುದದಾಳಿತ್ತು.

"ಈಗ ಎರಡು ಮೂರು ಸಲ ಮಾತ್ರವಾಯಿತು. ಮಾವಯ್ಯನವರೇ? ಎನ್ನುತ್ತ ಮೆಲ್ಲನೆ ತಲೆ ಎತ್ತಿ ಮಾವನ ಮುಖ ನೋಡಿದಳು.

ಶಿವಪ್ಪನಾಯಕನ ಮುಖದಲ್ಲಿ ಮಂದಹಾಸ ಮೂಡಿತ್ತು. ಅದನ್ನು ಕಂಡ ಚೆನ್ನಮ್ಮನ ಧೀರ ಮನಸ್ಸಿನ ಸರಳ ಮಾತುಗಳಿಗೆ ದಾರಿಯಾಯಿತು. ಶಿವಪ್ಪನಾಯಕನಿಗೂ ಕುತೂಹಲ ಚಿಕ್ಕ ಸೊಸೆಯ ಈ ಆಸಕ್ತಿಗಾಗಿ !

"ಇಂದು ಏನು ತಿಳಿದುಕೊಂಡೆ, ಹೇಳಮ್ಮ ನೋಡೋಣ."

ಒಂದು ಕ್ಷಣ ತಡೆದು ಮೆಲ್ಲಗೆ ಮಾತನಾಡಿದಳು ಚೆನ್ನಮ್ಮ;

"ಸರಕಾರದ ತೋಟಗಳಿಂದ ಮೆಣಸು, ಗೋಡಂಬಿ ಕಳವಾಗುತ್ತಿರುವದರಲ್ಲಿ ಕಾವಲದ ಹಿರಿಯ ಅಧಿಕಾರಿಯ ಕೈವಾಡವಿರುವದರ ವಿಚಾರಣೆ ನಡೆಸಿದ್ದಿರಿ. ತಾವು- ಅಧಿಕಾರಿಯ ಇಂಗಿತವನ್ನು ಹೊರಗೆಳೆದಿರಿ. ಅವನು ತನ್ನ ತಪ್ಪು ತಾನೇ ಒಪ್ಪುವಂತೆ ಮಾಡಿದಿರಿ."

"ಹೌದು, ವ್ಯವಸಾಯ–ಉದ್ದಿಮೆಗಳಿಗೆ ಕಳ್ಳತನ ಒಂದು ಬಲವಾದ ರೋಗ, ಅವು ಆರೋಗ್ಯವಾಗಿದ್ದರೇನೇ ಸಮಾಜಕ್ಕೆ ಸುಖ; ರಾಜ್ಯಕ್ಕೆ ಬಲ ! ಕಳವುಗಳನ್ನು ಉದಾಸೀನವಾಗಿ ಕಾಣಲಾಗದು. ಅದನ್ನು ಪ್ರೋತ್ಸಾಹಿಸುವ ಅಧಿಕಾರಿಗಳ ಭ್ರಷ್ಟಾಚಾರ ಕಳ್ಳತನಕ್ಕಿಂತ ಕೆಟ್ಟದ್ದು..."

"ಆ ವಿಚಾರಣೆಯನ್ನೇ ನಾನು ಕುತೂಹಲದಿಂದ ಆಲಿಸುತ್ತಿದ್ದೆ. ಆ ಅಧಿಕಾರಿಯ ದನಿ ಭೂಮಿಗಿಳಿದು ಹೋಗಿತ್ತು. ತನಗೆ ಯಾವ ಕಠೋರ ಶಿಕ್ಷೆ ಕಾದಿದೆಯೋ ಎಂದು ಆತ ಗಾಬರಿಯಾಗಿದ್ದ. ಕೊನೆಗೆ ತಾವು ಅವನ ಮಡದಿ ಮಕ್ಕಳಿಗಾಗಿ ದಯದೋರಿ, ವಿಧಿಸಿದ ಅಲ್ಪ ಶಿಕ್ಷೆಯನ್ನು ಸಂತೋಷದಿಂದ ಸ್ವೀಕರಿಸಿದನು. ದಯಾಗುಣ ದೊರೆಗಳ ಗೌರವವನ್ನು ಹೆಚ್ಚಿಸುವದು. ಮುಂದೆ ಅವನೂ ನಂಬಿಗೆಯ ಸೇವಕನಾಗಿ ಉಳಿದಾನು".

"ಚಿಕ್ಕವಳಾದರೂ ನೀನು ಬಹಳ ಬುದ್ಧಿವಂತೆ, ಚೆನ್ನಮ್ಮ ! ಎಲ್ಲವನ್ನೂ ಸರಿಯಾಗಿ ಗ್ರಹಿಸಿರುವೆ."

"ನನ್ನದು ಅವಿನಯವಾಯಿತೇನೋ, ಕ್ಷಮಿಸಬೇಕು," ಮತ್ತೆ ತಲೆಬಾಗಿ ವಂದಿಸಿದಳು.

"ಕ್ಷಮಿಸುವ ಪ್ರಶ್ನೆಯೆಲ್ಲಿ? ಇದು ಪುರಸ್ಕರಿಸುವ ಮಾತು ! ಹೆಣ್ಣು-ಮಕ್ಕಳೂ ಈ ದಿಸೆಯಲ್ಲಿ ಮನಸ್ಸು ತೊಡಗಿಸಿ ಮುಂದೆ ಬರಬೇಕೆಂದು ನನ್ನ ಅಪೇಕ್ಷೆ! ನಿನ್ನ ಅತ್ತೆಯರು ಐವರಿದ್ದಾರಲ್ಲ ಅವರು ಒಬ್ಬರೂ ಇತ್ತ ಗಮನ ಹರಿಸಲಿಲ್ಲ. ನಿನ್ನ ಹಿರಿಯ ಓರಗಿತ್ತಿಯರು ಇಬ್ಬರು ಇದ್ದಾರೆ, ಅವರೂ ಹಾಗೇನೇ !"

"ಅವರೆಲ್ಲ ಪತಿಪಾದಸೇವೆಯಲ್ಲಿ, ಪತಿಹಿತ ಚಿಂತನದಲ್ಲಿ ಧನ್ಯರಾಗುತ್ತಿದ್ದಾರೆ"

"ನೀನೂ ನಿನ್ನ ಪತಿಯನ್ನು ಓಲೈಸುತ್ತಿರುವೆಯಲ್ಲ. ಇಲ್ಲವೇನು ?"

ಚೆನ್ನಮ್ಮನಿಗೆ ನಸು ಲಜ್ಜೆ, ಮೊಗದಿರುವಿದಳು.

"ಆಗಲಮ್ಮಾ! ನೀನೊಬ್ಬಳಾದರೂ ನಮ್ಮ ವಿಚಾರಗಳ ನೆರವಿಗೆ ಬರುವೆಯೆಂದು ಸಂತೋಷವಾಗುತ್ತದೆ." ಎಂದು ಮನದುಂಬಿ ನುಡಿಯುತ್ತ

ಶಿವಪ್ಪನಾಯಕ ನಡೆದನು. ಹರುಷ ತಾಳಿದ ಹೃದಯದಿಂದ ನಲಿಯುತ್ತ ಚೆನ್ನಮ್ಮನೂ ಅರಮನೆಯೊಳಗೆ ಹೋದಳು.

ಶಿವಪ್ಪನಾಯಕನು ಕೆಳದಿಯ ರಾಜವಂಶದಲ್ಲಿ ಎಂಟನೆಯ ಅರಸು. ಆಡಳಿತದಲ್ಲಿ ದಕ್ಷತೆ, ಶೌರ್ಯ, ಪ್ರಜೆಗಳ ಕಲ್ಯಾಣಚಿಂತನೆ ಮುಂತಾದ ರಾಜರಿಗೆ ಭೂಷಣವಾಗುವ ಸದ್ಗುಣಗಳಿಂದ ಆತನು 'ಶಿಸ್ತಿನ ಶಿವಪ್ಪನಾಯಕ'ನೆಂದು ಈಗಲೂ ಕನ್ನಡ ನಾಡಿನ ಜನರಿಂದ ಹೊಗಳಿಸಿಕೊಳ್ಳುತ್ತಿದ್ದಾನೆ. ಚೆನ್ನಮ್ಮ ಆತನ ಚಿಕ್ಕ ಸೊಸೆ. ಹೆಸರಾಂತ ಪಟ್ಟಾಭಿಷಿಕ್ತ ರಾಣಿಯಾದ ಚೆನ್ನಮ್ಮಾಜಿಯ ಜೀವನ ಕಥನವನ್ನು ಬರೆಯುವ ಮೊದಲು ಕೆಳದಿಯ ರಾಜ್ಯವನ್ನು, ಶಿವಪ್ಪನಾಯಕನನ್ನು ಪರಿಚಯಿಸುವ ಇನ್ನೂ ನಾಲ್ಕು ಮಾತುಗಳನ್ನು ಬರೆಯುವದು ಅತ್ಯಗತ್ಯವಾಗಿದೆ.

ಭಾರತದಲ್ಲಿ ನೂರಾರು ಪ್ರಭುತ್ವಗಳ ನಡುವೆ ಸಂಭವಿಸುತ್ತಿರುವ ರಾಜಕೀಯ ಕೋಲಾಹಲದ ಹಾಗು ವಿದೇಶೀಯ ವ್ಯಾಪಾರಿಗಳು ಅತಿಕ್ರಮಿಸುತ್ತಿರುವ ಅತ್ಯಂತ ಕಠಿಣ ಪರಿಸ್ಥಿತಿಯ ಸಮಯದಲ್ಲಿ ಕೆಳದಿ ರಾಜ್ಯವು ೨೬೦ ವರ್ಷಗಳ ದೀರ್ಘ ಕಾಲ ಜನಹಿತಕ್ಕಾಗಿ ಮಹತ್ವದ ಪಾತ್ರವಾಡಿ ಬಾಳಿತು. ಈಗಿನ ಶಿವಮೊಗ್ಗ, ಉತ್ತರಕನ್ನಡ, ದಕ್ಷಿಣ ಕನ್ನಡ, ಕೊಡಗು. ಹಾಸನ, ಚಿಕ್ಕಮಗಳೂರು ಜಿಲ್ಲೆಗಳ ಮಲೆನಾಡ ಮಡಿಲಲ್ಲಿ, ಪಡುವಣ ಕಡಲತೀರದ ಪರಿಯಂತ ಹರಡಿಕೊಂಡಿದ್ದಿತು; ಅದು. ಅದರ ರಾಜರು ಹಿಂದೂ ಧರ್ಮ-ಸಂಸ್ಕೃತಿಗಳ ಪೋಷಕರಾಗಿದ್ದರು. ಕೃಷಿ, ವಾಣಿಜ್ಯಗಳನ್ನು ಅಭಿವೃದ್ಧಿಪಡಿಸಿದರು ಈ ರಾಜ್ಯವು ಪ್ರಬಲವಾಗಿತ್ತು, ಸಂಪದ್ಭರಿತವಾಗಿತ್ತು.

ಮೂಲಪುರುಷ ಚೌಡಪ್ಪನಾಯಕ ಕೃಷಿಕಾಯಕ ಮನೆತನದವನು. ಅದೃಷ್ಟವಶಾತ್ ಅವನಿಗೊಂದು ದೊಡ್ಡ ನಿಕ್ಷೇಪ ದೊರೆಯಿತು. ಅದರ ನೆರವಿನಿಂದ ಜನಹಿತದ ಅನೇಕ ಸತ್ಕಾರ್ಯಗಳಲ್ಲಿ ತೊಡಗಿ ಹಲವು ಗ್ರಾಮಗಳ ಜನರಿಗೆ ಮುಂದಾಳಾಗಿ ಬೆಳೆದನು. ಬಲ್ಲಾಳುತನದ ಕಾರ್ಯಗಳಲ್ಲಿಯೂ ಹೆಸರು ಹೊಂದಿದನು. ಅವನ ಪ್ರಸಿದ್ಧಿಯು ವಿಜಯನಗರದವರೆಗೂ ಪಸರಿಸಿತು. ಪಶ್ಚಿಮದಲ್ಲಿ ಮದೋದ್ರೇಕದಿಂದ ಮಲೆತು ನಿಂತ ಬಲಿಹಾಳು ಪ್ರಾಂತದ ನಾಯಕನ ಬಂಡಾಯವನ್ನು ಮುರಿಯುವದಕ್ಕಾಗಿ ಯಾರನ್ನು

ಕಳಿಸಬೇಕೆಂದು ಒಮ್ಮೆ ವಿಜಯನಗರದ ಅಚ್ಯುತರಾಯನ ದರಬಾರದಲ್ಲಿ ಆಲೋಚನೆ ನಡೆದಿದ್ದಿತು. ಕೆಲವರು ಚೌಡಪ್ಪನ ಹೆಸರನ್ನು ಸೂಚಿಸಿದರು. ರಾಯನು ಚೌಡಪ್ಪನನ್ನು ಕರೆಯಿಸಿ, ಆದರಿಸಿ ಆ ಬಂಡನ್ನು ಮುರಿಯಲು ನಿಯಮಿಸಿ ಕಳಿಸಿದನು.

ಚೌಡಪ್ಪನು ದಂಡುಕೂಡಿಸಿ ಶೌರ್ಯ–ಸಾಹಸಗಳಿಂದ ಬಂಡುಗಾರರ ಬಲವನ್ನು ನಾಶಮಾಡಿ ಮುಖ್ಯರಾದವರನ್ನು ಸೆರೆಹಿಡಿದು ವಿಜಯನಗರಕ್ಕೆ ಒಯ್ದನು. ಸಂತುಷ್ಟನಾದ ಅಚ್ಯುತರಾಯನು ಚೌಡಪ್ಪನಂಥವರು ತಮ್ಮ ಆಶ್ರಯದಲ್ಲಿ ಇರಬೇಕೆಂದು ಬಗೆದು. ಕೆಳದಿ, ಇಕ್ಕೇರಿ, ಮೋದೂರು, ಪೆರ್ಬಯಲೆ, ಬಿದನೂರು ಮುಂತಾದ ಎಂಟು ಪ್ರದೇಶಗಳನ್ನು ಅವನಿಗೆ ಇನಾಮಾಗಿ ಕೊಟ್ಟು, ಆ ಪ್ರದೇಶಗಳ ನಾಯಕನೆಂಬ ಬಿರುದನ್ನೂ ರಾಜ ಚಿಹ್ನೆಗಳನ್ನೂ ಕೊಟ್ಟು ಮನ್ನಿಸಿದನು. ಕೆಳದಿಯಲ್ಲಿ ಚೌಡಪ್ಪನಿಗೆ ಪಟ್ಟಾಭಿ ಷೇಕವಾಯಿತು, ಕ್ರಿ.ಶ. ೧೫೦೦ ರಲ್ಲಿ. [ಮುಂದೆ ಕೆಳದಿಯ ಬದಲಾಗಿ ಇಕ್ಕೇರಿ, ಬಿದನೂರು ಕ್ರಮವಾಗಿ ರಾಜಧಾನಿಗಳಾದವು.]

ಚೌಡಪ್ಪನಾಯಕನ ಅನಂತರ ಕ್ರಮವಾಗಿ ರಾಜ್ಯವಾಳಿದ ಅವನ ಮಗ ಸದಾಶಿವರಾಯನಾಯಕನೂ, ಮೊಮ್ಮಕ್ಕಳಾದ ದೊಡ್ಡಸಂಕಣ್ಣನಾಯಕ, ಚಿಕ್ಕಸಂಕಣ್ಣನಾಯಕ ಇವರೂ, ವಿಜಯನಗರದವರಿಗೆ ನೆರವಾಗುತ್ತ, ತಮ್ಮ ರಾಜ್ಯವನ್ನು ವಿಸ್ತರಿಸಿ, ಕೋಟೆ ಕೊತ್ತಲಗಳನ್ನು ಕಟ್ಟಿಸಿ ಭದ್ರಗೊಳಿಸಿದರು.

ದೊಡ್ಡಸಂಕಣ್ಣನಾಯಕನ ಮರಿಮೊಮ್ಮಗ ವೀರಭದ್ರನಾಯಕ ನಿಗಿಂತಲೂ ಅವನಿಗೆ ಕಕ್ಕನಾಗಿರುವ ಶಿವಪ್ಪನಾಯಕನು ಚಿಕ್ಕವನಾಗಿದ್ದನು. ಇವನು ಚಿಕ್ಕಸಂಕಣ್ಣನಾಯಕನ ಮೊಮ್ಮಗನು. ವೀರಭದ್ರನಾಯಕನ ಆಳಿಕೆ ಯಲ್ಲಿ, ತರುಣನಾದ ಶಿವಪ್ಪನಾಯಕನು ಹಲವು ಯುದ್ಧಗಳನ್ನು ಗೆದ್ದು, ವೀರಭದ್ರನಾಯಕನ ರಾಜ್ಯಭಾರಕ್ಕೆ ಆಧಾರವಾಗಿದ್ದನು. ವೀರಭದ್ರನಾಯಕ ನಿಗೆ ಗಂಡುಮಕ್ಕಳಿರಲಿಲ್ಲ. ಅವನ ತರುವಾಯ ಶಿವಪ್ಪನಾಯಕನಿಗೆ ಬಿದನೂರ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು. ಇವನ ಆಳಿಕೆ ಕ್ರಿ. ಶ. ೧೬೪೬ ರಿಂದ ೧೬೬೧.

ಶಿವಪ್ಪನಾಯಕನು ಮುಂತ್ಸದ್ದಿ; ಅಂದು ಚೆನ್ನಮ್ಮನಲ್ಲಿ ಆಡಳಿತಾತ್ಮಕ ಜ್ಞಾನದ ಬಗೆಗೆ ಔತ್ಸುಕ್ಯವನ್ನು ಕಂಡ ಆತನು ಆಕೆಯಲ್ಲಿ ಅದು ಅಭಿವೃದ್ಧಿಗೊಳ್ಳಬೇಕೆಂದು ಬಯಸಿದನು. ಚಿಕ್ಕಪುಟ್ಟ ಕೆಲಸಗಳನ್ನು ಚೆನ್ನಮ್ಮನನ್ನು ಕೇಳಿ ಮಾಡಬೇಕೆಂದು ಕರ್ಮಚಾರಿಗಳಿಗೆ ಆಜ್ಞೆಮಾಡಿದನು. ತಾನು ಬಗೆಹರಿಸಿದ ಜಟಿಲ ಸಮಸ್ಯೆಗಳನ್ನು ಆಕೆಗೆ ವಿವರಿಸಿ ಹೇಳುತ್ತಿದ್ದನು. ಇದರಲ್ಲಿ ಅವನು ಎರಡು ಉದ್ದೇಶಗಳನ್ನು ಹೊಂದಿದ್ದನು: "ಅರಮನೆಯ ಜನರು ಕೇವಲ ಭೋಗಜೀವಿಗಳಾಗಿರದೆ ರಾಜಕಾರಣದ ಅರಿವು ಪಡೆದು, ಸಮಯೋಚಿತ ಅವಧಾನಿಗಳಾಗಿರಬೇಕು. ಇದನ್ನು ಚೆನ್ನಮ್ಮನ ಮುಖದಿಂದ ಸಾಧಿಸಬಹುದು. ಎರಡನೆಯದಾಗಿ ಮುಂದೆ ತನಗೂ, ಮುಂದಿನವರಿಗೂ ರಾಜ್ಯಕಾರಭಾರದಲ್ಲಿ ಆಕೆಯಿಂದ ಸಹಾಯವಾಗಬೇಕು." ದೂರದರ್ಶಿಯಾದ ಈ ಅರಸು ಈ ಉದ್ದೇಶ ಹೊಂದಿದ್ದು ಯಥಾಯೋಗ್ಯವಾಗಿತ್ತು.

ಶಿವಪ್ಪನಾಯಕನಿಗೆ ಐದು ಜನ ಪತ್ನಿಯರು. ಎರಡನೆಯ ಶಾಂತಮ್ಮಾಜಿಯ ಹೊಟ್ಟೆಯಿಂದ ಭದ್ರಪ್ಪ, ಐದನೆಯ ಬಸವಲಿಂಗಮ್ಮಾಜಿಯ ಉದರದಿಂದ ಸೋಮಶೇಖರ ಎಂಬಿಬ್ಬರು ಅವನಿಗೆ ಗಂಡುಮಕ್ಕಳು. ಸೋಮಶೇಖರನ ಅರ್ಧಾಂಗಿನಿ ಚೆನ್ನಮ್ಮ !

ಚೆನ್ನಮ್ಮ ಬಾಲ್ಯದಲ್ಲಿಯೇ ಬಲು ಜಾಣೆಯೆನಿಸಿಕೊಂಡಿದ್ದಳು. ವಿವೇಚನಾತ್ಮಕ ಬುದ್ಧಿ ಅವಳದು ! ಆಕೆ ಕೊಟ್ಟಿಪುರದ ಸಿದ್ಧಪ್ಪಸೆಟ್ಟರ ಮಗಳು. ಕೊಟ್ಟಿಪುರವು ಫಲವತ್ತಾದ ಕೊಳ್ಳದ ಪ್ರದೇಶದ ಒಂದು ವ್ಯಾಪಾರಪ್ರಮುಖ ನಗರವು. ಗ್ರಾಮಾಂತರ ಬೆಳೆಗಾರರು ಅರಿಷಿಣ, ಮೆಣಸು ಮುಂತಾದ ಮಸಾಲೆಗಳನ್ನೂ, ಗೋಡಂಬೆ, ಗೇರಬೀಜ ಯಾಲಕ್ಕಿ. ಅಡಿಕೆ, ತೆಂಗು, ಚಂದನ ಮೊದಲಾದವುಗಳನ್ನು ಅಲ್ಲಿಗೆ ತರುತ್ತಿದ್ದರು. ಅಲ್ಲಿಯ ವ್ಯಾಪಾರಿಗಳು ಅವುಗಳನ್ನು ಸಂಗ್ರಹಿಸಿ ನೆರೆಯ ನಾಡುಗಳಿಗೆ ನಿರ್ಯಾತ ಮಾಡುತ್ತಿದ್ದರು. ಹಾಗೆಯೇ ಬೆಳವಲ ಕಡೆಗಳಿಂದ ಬರುವ ಧಾನ್ಯಗಳನ್ನೂ, ಬಟ್ಟೆಗಳನ್ನೂ ತಮ್ಮ ಒಳನಾಡಿನಲ್ಲಿ ವಿತರಣ ಮಾಡುತ್ತಿದ್ದರು. ಪೋರ್ತುಗೀಜರಾದಿಯಾಗಿ ವಿದೇಶೀ ವ್ಯಾಪಾರಿಗಳು ಕೂಡ ಕೊಟ್ಟಿಪುರದವರೆಗೆ ಬರುತ್ತಿದ್ದರು. ಅಲ್ಲಿ ಸಿದ್ಧಪ್ಪಸೆಟ್ಟಿ ಹಿರಿಯ ವರ್ತಕ.

ಅವನ ಮುದ್ದುಗುವರಿ ಚೆನ್ನಮ್ಮ ಚಿಕ್ಕಂದಿನಲ್ಲಿ ತಂದೆಯ ಬಳಿಯಲ್ಲಿಯೇ ಬಂದು ಬಹಳ ಹೊತ್ತು ಆಡಿಕೊಂಡಿರುವಳು. ಬರು ಹೋಗುವವರಿಗೆ ಮೆಚ್ಚಿನ ಮಗುವಾಗಿದ್ದಳು. ಬರಬರುತ್ತ ಆಕೆ ಅವರ ಮಾತುಕತೆಗಳನ್ನು, ವ್ಯವಹಾರಗಳನ್ನು ಗಮನವಿಟ್ಟು ಕೇಳುತ್ತಿದ್ದಳು, ನೋಡುತ್ತಿದ್ದಳು. ರಾಜರುಗಳ ಪರಸ್ಪರ ಸ್ನೇಹ–ವೈರಗಳ ಕಥೆಗಳನ್ನು, ಅರಮನೆಗಳ ಸುದ್ದಿಗಳನ್ನು ಯಾರಾದರೂ ಹೇಳುತ್ತಿದ್ದರೆ ಕುತೂಹಲದಿಂದ ಆಲಿಸುತ್ತಿದ್ದಳು. ಹೊಸದೆನಿಸಿದುದರಲ್ಲಿ ಕುತೂಹಲಕರವಾದ ಪ್ರಶ್ನೆಗಳನ್ನು ತಂದೆಗೆ ಕೇಳಿ ವಿವರಣೆ ಪಡೆಯುತ್ತಿದ್ದಳು. ತಿಳುವಳಿಕೆ ಹೆಚ್ಚಿದಂತೆ ಅಂಗಡಿಯ ಗುಮಾಸ್ತರೊಡನೆ ಅಪ್ಪನ ಕಾರ್ಯಕಲಾಪಗಳಲ್ಲಿ ಓಡಾಡಿದಳು.

ಕಿಶೋರಿಯಾಗಿದ್ದ ಅವಳು ಕೌಮಾರ್ಯಾವಸ್ಥೆಯಲ್ಲಿ ಕಾಲಿಟ್ಟಳು. ಚೆಲುವೆಯಾದ ಚೆನ್ನಗುವರಿಯ ಅಂಗಾಂಗಗಳ ಸೌಂದರ್ಯಕ್ಕೆ ಕಳೆಕಟ್ಟಿತು. ಅಳಿಮನದಿಂದ ಬೀರುವ ಕಂಡವರ ನೋಟಗಳನ್ನು ಎದುರಿಸಲಾಗದೆ ಈಗ ಆಕೆ ತನ್ನ ಮೊದಲಿನ ಹರಿದಾಟವನ್ನು ಕಡಿಮೆಮಾಡಿ ಹಿಂದೆ ಹಿಂದೆ ಇರಹತ್ತಿದಳು. ಆದರೂ ಆಕೆ ಅದ್ಭುತವಾದ, ರಮ್ಯವಾದ, ಮನೋವೇದಕವಾದ ರಾಜಕೀಯ, ಸಾಮಾಜಿಕ ಸಂಗತಿಗಳನ್ನು ತಿಳಿಯಲು ಆತುರಳಾಗಿರುತ್ತಿದ್ದಳು. ಮನೆಯಲ್ಲಿ ಅಪ್ಪನನ್ನು, ಅಣ್ಣಂದಿರನ್ನು, ಬಂಧುಗಳನ್ನು ಕೇಳಿ ವಿಶ್ಲೇಷಿಸುತ್ತಿದ್ದಳು. ಅಂಗಡಿಯ ಮೇಲಿನ ಅಟ್ಟದಲ್ಲಿ ನಿಂತು ಜಾಲಂದರದ ಕಿಂಡಿಗಳಿಂದ, ಮುಂದಿನ ಪಟಾಂಗಣದಲ್ಲಿ ಬೇರೆ ಬೇರೆ ನಾಡುಗಳಿಂದ ಬಂದು ನೆರೆದ, ನಾನಾ ವಿಧದ ಬಂಡಿ, ಹೇರೆತ್ತು, ಆನೆ ಕುದುರೆಗಳ ತಳಕು–ಮಳಕು ಚಲನೆಗಳನ್ನು, ಸರಕುಗಳನ್ನು ಇಳಿಸುವ–ಹೇರುವ ಜನರ ಚಟುವಟಿಕೆಗಳನ್ನು ನೋಡಿ ನಲಿಯುತ್ತಿದ್ದಳು.

ಚೆನ್ನಮ್ಮ ತಂದೆಗೆ ಅಚ್ಚು–ಮೆಚ್ಚು! ಆದರೆ ತಾಯಿಗೆ? ಮಗಳ ಚಿಕಿತ್ಸಕ ಬುದ್ಧಿ, ಚಟುವಟಿಕೆ, ಚಿಂತನಗಳು ಸೇರುತ್ತಿರಲಿಲ್ಲ. 'ನೀನೊಂದು ಗಂಡುಗಡಸುಗಾತಿ' ಎಂದು ಮಗಳ ಬಗೆಗೆ ಬೇಸರದ ಕಟು ಮಾತು ಆಡಿದಾಗ ಸಿದ್ಧಪ್ಪಸೆಟ್ಟಿ 'ಅದಕ್ಕೆ ತಕ್ಕ ಎದೆಗಾರಿಕೆಯೂ ಬುದ್ಧಿಯೂ ನಮ್ಮ ಮಗಳಿಗಿದೆ' ಎಂದು ನಗುತ್ತಿದ್ದನು. ಆದರಿಂದ ಮುಖಭಂಗಿತಳಾದ ತಾಯಿ; 'ನೀವು ನಕ್ಕು, ನಕ್ಕು

ಹೀಗೆ ಮಾಡಿಬಿಟ್ಟಿದ್ದೀರಿ. ಈಕೆ ನಿಮ್ಮ ಮಗಳು ಮಾತ್ರ! ನನ್ನ ಮಗಳಲ್ಲ.' ಎಂದು ಮೊಗದಿರುವಿ ಹೋಗುವಳು. ಆದರೆ ಚೆನ್ನಮ್ಮನ ಭವಿಷಜ್ಜೀವನ ಭವ್ಯವಾಗಿದೆಯೆಂಬುದನ್ನು ಆ ತಾಯಿ ಈಗ ಹೇಗೆ ತಿಳಿದಾಳು ?

ಶಾಂತಿಕಾಲದಲ್ಲಿ ಶಿವಪ್ಪನಾಯಕನ ಗಜದಲಗಳು ರಾಜ್ಯದ ಬೇರೆ ಬೇರೆ ಅರಣ್ಯಗಳಲ್ಲಿ ಹಲಕೆಲವು ದಿವಸ ನೆಲೆಯಾಗಿರುತ್ತಿದ್ದವು. ಕೊಟ್ಟಿಪುರದ ಹತ್ತಿರದ ಕಾಡಿನಲ್ಲಿ ಗಜದಲವು ಬೀಡಾರ ಮಾಡಿದಾಗ ಅದರ ತರುಣ ಅಧಿಕಾರಿ ಭರಮೆ ಮಾವುತನು ಅವಶ್ಯಕ ಸಾಮಾನುಗಳ ಸಲುವಾಗಿ ಸಿದ್ಧಪ್ಪಸೆಟ್ಟರ ಕಡೆಗೆ ಬರುವನು. ರಾಜ್ಯದಲದ ಒಬ್ಬ ಅಧಿಕಾರಿಯೆಂದು ಅವನಿಗೆ ಆದರಾತಿಥ್ಯಗಳು ದೊರೆಯುತ್ತಿದ್ದವು. ಶಿವಪ್ಪನಾಯಕನ ಕಿರಿಯ ಕುಮಾರ ಸೋಮಶೇಖರನಿಗೆ ಆನೆ-ಕುದುರೆಗಳನ್ನೇರಿ ವಿವರಿಸುವದಲ್ಲಿ ಆಸಕ್ತಿ ಬಹಳ ! ಅದಕ್ಕೆ ಭರಮೆ ಮಾವುತನ ಅನುಕೂಲ ಮಾಡಿಕೊಡುತ್ತಿದ್ದುದರಿಂದ ಅವರಿಬ್ಬರಲ್ಲಿ ಸಲುಗೆಯ ಸ್ನೇಹ ಬೆಳೆದುಬಂದಿತ್ತು. ಗಜದಲವು ರಾಜಧಾನಿಯಿಂದ ಹೊರಗೆ ಹೋಗಿ ನೆಲೆಸಿರುವಾಗಲೂ ಆ ರಾಜಕುಮಾರನು ಅಶ್ವಾರೂಢನಾಗಿ ಅಲ್ಲಿಗೆ ಹೋಗುವನು. ಹೀಗೆ ಒಮ್ಮೆ ಕೊಟ್ಟಿಪುರದ ನೆರೆಯ ಗಜದಲದ ನೆಲೆಗೆ ಹೋದಾಗ ಸಂದರ್ಭಾನುಸಾರವಾಗಿ ಭರಮೆ ಮಾವುತನೊಡನೆ ಸಿದ್ಧಪ್ಪಸೆಟ್ಟರಲ್ಲಿ ಬೀಡಾರಮಾಡುವ ಪ್ರಸಂಗ ಸೋಮಶೇಖರನಿಗೆ ಒದಗಿತು. ಸೆಟ್ಟಿ, ರಾಜಕುಮಾರನಿಗೆ ಉಚಿತವಾದ ಆದರೋಪಚಾರ ಮಾಡಿದನು. ಅದೇ ಆಗ ಮೊಗ ಮೀಸೆ ಮೂಡಿಬರುತ್ತಿದ್ದ ಸೋಮಶೇಖರನ ದೃಷ್ಟಿ ಚೆನ್ನಮ್ಮನತ್ತ ಹರಿದ ಸೂಕ್ಷ್ಮ ಸುಳಿವು ಸಿಕ್ಕಿತು, ಭರಮೆ ಮಾವುತನಿಗೆ. ಆತನು ಪರಭಾರೆ ಕೇಳಿ ತನ್ನ ಗೆಳೆಯನ ಒಲವನ್ನು ಸ್ಪಷ್ಟಪಡಿಸಿಕೊಂಡನು. ನಗರಕ್ಕೆ ಬಂದ ಬಳಿಕ ಅವನು ರಾಣಿ ಬಸವಲಿಂಗಮ್ಮಾಜಿಯವರ ದರ್ಶನ ಪಡೆದು, ಕುಮಾರನ ಮನೋಗತವನ್ನು ವಿನಯದಿಂದ ಅರಿಕೆಗೊಳಿಸಿದನು. ಚೆನ್ನಮ್ಮನ ಗುಣ-ಸೌಂದರ್ಯಗಳನ್ನು ಹೊಗಳಿ ಹೇಳಿದನು. ರಾಣಿಯು ಇದನ್ನೆಲ್ಲ ಶಿವಪ್ಪನಾಯಕನಿಗೆ ಅರುಹಿದಳು. ಸಿದ್ಧಪ್ಪಸೆಟ್ಟಿಯ ಘನತೆ ನಾಯಕನಿಗೆ ಗೊತ್ತಿತ್ತು. ಆತನ ಮಗಳ ಪ್ರಬುದ್ಧತೆಯ ವಾರ್ತೆಯೂ ಅವನ ಕಿವಿದೆರೆಗೆ ಬಂದಿತ್ತು. ಅದರಿಂದ ಆತನು 'ಒಳ್ಳೇದು ವಿಚಾರಿಸೋಣ' ಎಂದು ತನ್ನ ಪ್ರೀತಿಯ ಕಿರಿಯ ಹೆಂಡತಿಗೆ ಹೇಳಿದನು.

ಕುದುರೆಗಳನ್ನು ಹೂಡಿ ಮುಸುಕಿನ ಬಂಡಿಯನ್ನು ಪರಿವಾರದೊಡನೆ ಕೋಟಿಪುರಕ್ಕೆ ಕಳುಹಿ ಚೆನ್ನಮ್ಮನನ್ನು ಬಿದನೂರ ಅರಮನೆಗೆ ಕರೆಯಿಸಿಕೊಳ್ಳಲಾಯಿತು. ಗುರುಗಳು ಪಂಡಿತರು ಚೆನ್ನಮ್ಮನ ಸಾಮುದ್ರಿಕ ಲಕ್ಷಣಗಳನ್ನು, ಜನ್ಮಕುಂಡಲಿಯನ್ನು ಪರಿಶೀಲಿಸಿ ಒಪ್ಪಿಗೆಯಿತ್ತರು. ಸೌಂದರ್ಯದಲ್ಲಿ ಕುಂದಿರಲಿಲ್ಲ. ಬುದ್ಧಿ ಗುಣಗಳ ಖ್ಯಾತಿಯಿತ್ತು. ರಾಣೀವಾಸದವರೆಲ್ಲ ಮೆಚ್ಚುಗೆ ಸೂಚಿಸಿದರು. ಸೋಮಶೇಖರನಲ್ಲಿ ಉತ್ಸಾಹ ಕಂಡಿತು. ಶಿವಪ್ಪನಾಯಕನು ಗೌರವಪೂರ್ವಕವಾಗಿ ಸಿದ್ಧಪ್ಪಸೆಟ್ಟರಿಗೆ ಆಹ್ವಾನ ಕಳುಹಿದನು. ನಿಬ್ಬಣ ಬಂದಿತು. ರಾಜೋಚಿತ ರೀತಿಯಿಂದ ಚೆನ್ನಮ್ಮನ ವಿವಾಹವು ಸೋಮಶೇಖರನೊಡನೆ ವಿಜೃಂಭಣೆಯಿಂದ ನಡೆಯಿತು.

ಪತಿಯ ಮನೆಗೆ ಬಂದು ಚೆನ್ನಮ್ಮ ಕೆಲವೇ ದಿವಸಗಳಲ್ಲಿ ಅರಮನೆಯ ವ್ಯವಸ್ಥೆಯಲ್ಲಿ ತನ್ನ ಬುದ್ಧಿ ಜಾಣ್ಮೆಗಳನ್ನು ಬಳಸಿ ಪ್ರಭಾವ ಬೀರಿದಳು. ಹಿಂದೆ ಹೇಳಿದಂತೆ ಆಡಳಿತದಲ್ಲಿ ಕೂಡ ಗಮನಹರಿಸುತ್ತಿರುವದನ್ನು ಕಂಡ ಶಿವದೊರೆಗೆ ಎಲ್ಲಿಲ್ಲದ ಸಂತೋಷ ಉಂಟಾಗಿತ್ತು. ಚಿಕ್ಕ–ಪುಟ್ಟ ಕಾರ್ಯಗಳಲ್ಲಿ ವಿಚಾರಿಸಿ ನಿರ್ಣಯಿಸುವದನ್ನು ಚೆನ್ನಮ್ಮನಿಗೇ ಬಿಟ್ಟು ನೆರವೇರಿಸಿಕೊಳ್ಳ ಹತ್ತಿದನು.

ಮಾವನಿಗೆ ನೆರವಾಗುವ ರಾಜಕಾರ್ಯಗಳನ್ನು ಮಾಡಿ–ಮಾಡಿದಂತೆ ಮತ್ತಿಷ್ಟು ಮಾಡುವ ಉತ್ಸಾಹ ಚೆನ್ನಮ್ಮಾಜಿಗೆ! ತನ್ನ ಪತಿಯನ್ನು ಪ್ರೇರೇಪಿಸಿ ಕರೆದುಕೊಂಡು ಗ್ರಾಮಾಂತರಗಳಿಗೂ ಹೋಗುವಳು. ಅಲ್ಲಿ ಜನಜೀವನದಲ್ಲಿಯ ಕುಂದುಕೊರತೆಗಳನ್ನು ಪರಿಶೀಲಿಸಿ ತಿಳಿದು ರಾಜಕರ್ಮಿಗಳಿಗೆ ಇಬ್ಬರೂ ಸಲಹೆ ನೀಡುವರು. ಈ ಸಂಚಾರಗಳಲ್ಲಿ ಚೆನ್ನಮ್ಮ ಕುದುರೆ ಸವಾರಿ ಮಾಡುವ ರೂಢಿಯನ್ನು ಚನ್ನಾಗಿ ಬಲಪಡಿಸಿಕೊಂಡಳು. ಗಜಾಶ್ವಗಳ ವೈಹಾಳಿಯಲ್ಲಿ ಸೋಮಶೇಖರನಾಯಕ ಮೊದಲೇ ತುಂಬಾ ಒಲವುಳ್ಳವ! ಈಗ ಮನೋಜ್ಞ ಮಡದಿಯೊಡನೆ ಬಲ್ಲಿದ ಕುದುರೆಗಳ ಸವಾರಿ ಮಾಡುವಲ್ಲಿ ಅವನಿಗಾಗುವ ಮನೋಲ್ಲಾಸಕ್ಕೆ ಮೇರೆ ಇರುತ್ತಿರಲಿಲ್ಲ. ಪತಿಗೆ ಪ್ರೇರಕಳಲ್ಲದೆ ಚೇತಕ ಶಕ್ತಿಯೂ ಆಗಿದ್ದಳು ಚೆನ್ನಮ್ಮಾಜಿ.

●●

# ೨. ಬೆಳೆದ ಬಗೆ

ಜನರ ಕಲ್ಯಾಣಕ್ಕಾಗಿ ಕಾನೂನುಗಳನ್ನು ರಚಿಸಿ, ಅವುಗಳನ್ನು ಚಾಚೂ ತಪ್ಪದೆ ಪಾಲಿಸುವ ದೃಢವಾದ ನಿಲುವು ಶಿವಪ್ಪನಾಯಕನದು. ಅದ ರಿಂದಲೇ ಅವನನ್ನು 'ಶಿಸ್ತಿನ ಶಿವಪ್ಪನಾಯಕ'ನೆಂದು ಇತಿಹಾಸಕಾರರು ಕರೆದದ್ದು !

ಶಿವಪ್ಪನು ರಾಜ್ಯಾಧಿಕಾರ ಹೊಂದಿದೊಡನೆ, ರಾಜ್ಯದ ಗಡಿಗಳಲ್ಲಿ ನುಗ್ಗಿ ಬರುತ್ತಿದ್ದ ವೈರಿ ಅರಸರ ಸೊಕ್ಕಡಗಿಸಲು ಮೊದಲು ತೊಡಗಿದನು. ಅವರನ್ನು ಸದೆಬಡಿದು ಹಿಂದೂಡಿದುದಲ್ಲದೆ ಅವರ ಕೆಲವು ಪ್ರದೇಶಗಳನ್ನು ಸಹ ಸೆಳೆದುಕೊಂಡನು. ಶರಣಾಗತರಾದವರ ಸೀಮೆಯನ್ನು ಮರಳಿಕೊಟ್ಟು ಸ್ನೇಹಿತರನ್ನಾಗಿ ಮಾಡಿಕೊಂಡನು. ವಿಜಾಪುರ ಬಾದಶಹನ ಅತಿಕ್ರಮಣ ಗಳನ್ನು ಹೋರಾಡಿ ಹಿಮ್ಮೆಟ್ಟಿಸಿದನು. ಪೋರ್ತುಗೀಜರ್, ಇಂಗ್ಲೀಷರು ಮುಂತಾದ ವಿದೇಶೀಯರನ್ನು ವ್ಯಾಪಾರಮಟ್ಟಿಗೆ ಸಂಬಂಧವಿರಿಸಿಕೊಂಡಿರು ವಂತೆ ತೆಪ್ಪಗಾಗಿರಿಸಿದನು. ಅಸೂಯೆಯಿಂದ ಅಸಂತುಷ್ಟರಾಗಿರುವ ರಾಜಸಂಬಂಧಿಕರು ಗದ್ದಲ ಮಾಡದಂತೆ ಸುಮ್ಮನಾಗಿಸಿದ್ದನು.

ಹೊಸ ರಾಜಧಾನಿ ಬಿದನೂರು ನಗರವನ್ನು ಬಗೆಬಗೆಯಿಂದ ಅಭಿವೃದ್ಧಿ ಪಡಿಸಿದನು. ಕಸಬು–ಕಲೆ–ಕೈಗಾರಿಕೆಯವರನ್ನು, ಕವಿಗಳು–ಪಂಡಿತರು–ಮುಂತಾದ ಬುದ್ಧಿಜೀವಿಗಳನ್ನು ಬೇರೆ ಬೇರೆ ಕಡೆಗಳಿಂದ ರಾಜಧಾನಿಗೆ ಬರ ಮಾಡಿಕೊಂಡು ಅವರಿಗೆ ವಸತಿ ಸೌಕರ್ಯಗಳನ್ನು ಒದಗಿಸಿ ನೆಲೆಗೊಳಿಸಿ ಕೊಂಡನು. ವಿದೇಶೀಯರ ವ್ಯಾಪಾರಕ್ಕೂ ಉತ್ತೇಜನ ಕೊಟ್ಟನು. ಮಠ ಮಾನ್ಯಗಳಿಗೆ ಉಂಬಳಿ ಹಾಕಿಕೊಟ್ಟು ಧರ್ಮ ಜಾಗ್ರತಿಗೆ ಅನುವಾಗುವಂತೆ ಮಾಡಿದನು. ಎಲ್ಲ ಮತ ಪಂಥಗಳನ್ನೂ ಗೌರವಿಸಿ ಜನರಲ್ಲಿ ಶ್ರದ್ಧೆ ಬೆಳೆ ಯುವಂತೆ ಮಾಡಿದನು.

ಒಕ್ಕಲುತನಕ್ಕೆ ಪ್ರಾಮುಖ್ಯತೆಯನ್ನಿತ್ತನು. ಸಾಗುವಳಿಗೆ ಯೋಗ್ಯವಾದ ಒಂದಂಗೈಯಗಲವಾದ ಭೂಮಿಯೂ ಬೀಳಾಗದಂತೆ ನೋಡಿಕೊಂಡನೆಂದು ಪ್ರತೀತಿ! ರೈತರಿಗೆ ಕಿರುಕಳ ಕೊಡುತ್ತಿದ್ದ ಅವಾಂತರ ತೆರಿಗೆಗಳನ್ನು, ದಂಡಗಳನ್ನು ತೆಗೆದುಹಾಕಿದನು. ಕಳ್ಳರು ನುಸುಳಿ ಹೋಗದಂತೆ ಹಿಡಿದು ಶಿಕ್ಷಿಸುವ ವ್ಯವಸ್ಥೆ ಮಾಡಿದನು. ರಾಜಕರ್ಮಚಾರಿಗಳಲ್ಲಿ ಭ್ರಷ್ಟರನ್ನು, ಆಲಸಿಗಳನ್ನು ದಂಡಿಸಿದನು, ಇಲ್ಲವೆ ಮನೆಗಟ್ಟಿದನು. ಪ್ರಾಮಾಣಿಕರನ್ನು ಪ್ರೋತ್ಸಾಹಿಸಿದನು ಜನತೆಗೆ ಶುದ್ಧ ಮತ್ತು ದಕ್ಷ ಆಡಳಿತ ಒದಗಿಸಿ ಪ್ರಜಾಹಿತದ ರಾಜನಾದನು. ಗುರುದೇವರಲ್ಲಿ ಭಕ್ತಿಯನ್ನಿರಿಸಿ ಧರ್ಮನಿಷ್ಠನೆನಿಸಿದನು. ಹದಿನೈದು ವರ್ಷ ಮಾತ್ರ ರಾಜ್ಯವಾಳಿದ ಈ ಜನಪ್ರಿಯ ದೊರೆ ಕ್ರಿ. ಶ. ೧೬೬೧ ರಲ್ಲಿ ವಿಜಾಪುರ ಸೇನಾನಿ ಬಲೂಲಖಾನನನ್ನು ಸೋಲಿಸಿದ ಯುದ್ಧದಲ್ಲಿ ಆಯಾಸಗೊಂಡು ಅನಾರೋಗ್ಯಕ್ಕೊಳಗಾದನು. ರಾಜಧಾನಿಗೆ ಬಂದು ಹಾಸಿಗೆ ಹಿಡಿದವನು ಏಳಲಿಲ್ಲ, ಶಿವಾಧೀನನಾದನು.

ಮರಣ ಹೊಂದಿದ ರಾಜನಿಗೆ ವಯಸ್ಕರಾದ ಗಂಡುಮಕ್ಕಳಿದ್ದರೂ ಅವರನ್ನು ಹಿಂದಿರಿಸಿ, ಪ್ರಬಲ ತಮ್ಮಂದಿರಿದ್ದರೆ ಅವರನ್ನು ಮೊದಲು ಅರಸರನ್ನಾಗಿ ಮಾಡುವದು ಈ ರಾಜಮನೆತನದಲ್ಲಿ ಹಿಂದೆ ಎರಡು ಸಲ ನಡೆದು ಹೋಗಿತ್ತು ಈ ರೂಢಿಯನ್ನು ಮುಂದಿಟ್ಟುಕೊಂಡು ಶಿವಪ್ಪನಾಯಕನ ಮಲತಮ್ಮನಾದ ವೆಂಕಟಪ್ಪನಾಯಕನು ಹಿರಿಯ ಮಂತ್ರಿಗಳ ನೆರವು ಪಡೆದು ರಾಜ್ಯಾರೋಹಣ ಮಾಡಿದನು. ರಾಜಪುತ್ರ ಭದ್ರಪ್ಪನಾಯಕನಿಗೆ ಕೊಂಚ ಅಸಮಾಧಾನವಾದರೂ ಕಕ್ಕನ ಗೌರವವನ್ನು ಭಂಗಿಸಲು ಮನಸ್ಸು ಮಾಡಲಿಲ್ಲ. ಆದರೆ ಶಿವಪ್ಪನಾಯಕನ ಸೋದರಳಿಯನೂ ಮುಖ್ಯ ದಳಪತಿಯೂ ಆಗಿದ್ದ ಶಿವಲಿಂಗನಾಯಕನು ಭದ್ರಪ್ಪನ ಪರವಾಗಿ ಈ ಸಿಂಹಾಸನಾರೋಹಣವನ್ನು ವಿರೋಧಿಸುತ್ತಿದ್ದನು. ಈ ತಿಕ್ಕಾಟದಲ್ಲಿ ಸೋಮಶೇಖರ, ಚೆನ್ನಮ್ಮಾಜಿಯವರು ಧರ್ಮಸಂಕಟಕ್ಕೆ ಸಿಕ್ಕು ತಟಸ್ಥರಾಗಿ ಉಳಿಯಬೇಕಾಯಿತು. ಹೊಸ ಆಳ್ವಿಕೆಗೆ ಹನ್ನೊಂದು ತಿಂಗಳಾಗಿತ್ತು. ಅಳಿಯ ಶಿವಲಿಂಗನಾಯಕನು ಭದ್ರಪ್ಪನಾಯಕನ ಹೆಸರಿನಿಂದ "ವೆಂಕಟಪ್ಪನಾಯಕನ ವಧೆ ಮಾಡಬೇಕು" ಎಂದು ಕೃತಕ ಆಜ್ಞೆಯನ್ನು ಹಂತಕನಾದ ಚಿಟ್ಟೋಜೆಟ್ಟಿಗೆ ರಹಸ್ಯವಾಗಿ ತಲುಪಿಸಿದನು. ವೆಂಕಟಪ್ಪನಾಯಕನ ಅಂತ್ಯವಾಯಿತು.

ಕ್ರಿ. ಶ. ೧೬೬೨ ರಲ್ಲಿ ಭದ್ರಪ್ಪನಾಯಕನಿಗೆ ಬಿದನೂರ ಅರಮನೆಯಲ್ಲಿ ರಾಜ್ಯಪಟ್ಟಾಭಿಷೇಕವಾಯಿತು. ಭದ್ರಪ್ಪನಾಯಕನು ಸ್ವತಃ ಶೂರನು; ತಮ್ಮನಾದ ಸೋಮಶೇಖರನನ್ನು ಯುವರಾಜನನ್ನಾಗಿ ಮಾಡಿದನು. ಅವನ ಪತ್ನಿ ಚೆನ್ನಮ್ಮಾಜಿಯ ಕಾರ್ಯತತ್ಪರತೆಯ ಸಹಾಯವು ಸದಾ ಅರಸನಿಗೆ ಬೇಕಾಗಿತ್ತು. ರಾಜಕೀಯ ಮಂತ್ರಾಲೋಚನೆಯಲ್ಲಿಯೂ ಆಕೆಯ ಸಲಹೆ ಪಡೆಯುತ್ತಿದ್ದನು. ಆಂತರಿಕ ಆಡಳಿತದಲ್ಲಿ ಆಕೆಯ ಅಧಿಕಾರವನ್ನು ಹೆಚ್ಚಿಸಿದನು. ಯುವರಾಜ ಸೋಮಶೇಖರ ಸಭ್ಯನು! ಅಣ್ಣನ ಅನುಜ್ಞೆಯನ್ನು ಮೀರದೆ, ಪತ್ನಿಯ ಸಲಹೆಯನ್ನು ಸ್ವೀಕರಿಸುತ್ತ ಸರ್ವರಿಗೂ ಹಿತ ಚಿಂತಕನೆನಿಸಿಕೊಂಡು ವರ್ತಿಸುತ್ತಿದ್ದನು. ಅರಸನ ಇಬ್ಬರು ಹೆಂಡಿರು ಬೊಮ್ಮಮ್ಮಾಜಿ, ಸಿದ್ಧಮ್ಮಾಜಿ ಇವರು ಪತಿಪಾದ ಸೇವಾನಿರತರು. ಚಿಕ್ಕ ನೆಗೆವಣ್ಣೆ ಚೆನ್ನಮ್ಮಾಜಿಯ ಕಾರಭಾರಕ್ಕೆ ಎಂದೂ ಅಸೂಯೆಪಟ್ಟವರಲ್ಲ. ಅದನ್ನು ಮನ್ನಿಸಿ ನಡೆಯುತ್ತಿದ್ದರು. ಚೆನ್ನಮ್ಮನೂ ಅವರನ್ನು ಅಕ್ಕಂದಿರಂತೆ ಭಾವಿಸಿ ಗೌರವಿಸುತ್ತಿದ್ದಳು.

ಕೆಳದಿಗೆ ಮೈಸೂರರಸರು ಪರಂಪರಾಗತ ವೈರಿಗಳು. ಶಿವಪ್ಪ ನಾಯಕನು ಅವರ ಸದ್ದಡಗಿಸಿದ್ದನು. ಆದರೆ ಅರಸೊತ್ತಿಗೆಯ ತೀವ್ರ ಬದಲಾವಣೆಯ ಸಂದು ಸಾಧಿಸಿ ಕೆಳದಿಯ ಕೆಲವು ಕೋಟೆಗಳನ್ನು ಅವರು ಹಿಡಿದುಕೊಂಡರು. ಭದ್ರಪ್ಪನಾಯಕನು ಮೊದಲು ಶಿವಲಿಂಗನಾಯಕನನ್ನು ಸೈನ್ಯದೊಡನೆ ಕಳಿಸಿದನು. ಆತನು ಆ ಕೋಟೆಗಳನ್ನು ತಿರುಗಿ ವಶಪಡಿಸಿಕೊಂಡು ಮೈಸೂರ ಸೀಮೆಯನ್ನು ಹೊಕ್ಕನು. ಕಳಲೆಯ ಕಾಂತಪ್ಪನೆಂಬ ಮೈಸೂರ ಸೇನಾನಿ ದೊಡ್ಡ ಪಡೆಯೊಡನೆ ಇವನನ್ನು ತಡೆಯಲು ಬಂದು ಕಣಗಾಲ ಬಯಲಲ್ಲಿ ಪಾಳಯಬಿಟ್ಟನು. ಅಲ್ಲಿ ನಡೆದ ಭೀಕರ ಸಂಗ್ರಾಮದಲ್ಲಿ ಕೆಳದಿಯ ಸೈನ್ಯಕ್ಕೆ ಗೆಲುವಾಯಿತಾದರೂ ಶೌರ್ಯದಿಂದ ಹೋರಾಡಿದ ದಲಪತಿ ಶಿವಲಿಂಗನಾಯಕನು ಆಯತಪ್ಪಿ ಮರಣವನ್ನಪ್ಪಿದನು. ಇದನ್ನು ಕೇಳಿ ಭದ್ರಪ್ಪನಾಯಕನು ಖತಿಗೊಂಡು ಮಂತ್ರಪ್ಪ ಸೈನ್ಯದೊಡನೆ ಬಂದು ವೈರಿಗಳನ್ನು ಪುಡಿಮಾಡಿ, ಚಿಕ್ಕನಾಯಕನಹಳ್ಳಿ, ಹೊನ್ನವಳ್ಳಿ, ಕುಂದುಗೆರೆ, ಬೂದಿವಾಳ ಮುಂತಾದ ಕೋಟೆಗಳನ್ನು ವಶಪಡಿಸಿಕೊಂಡು ಮೈಸೂರ ಗಡಿಯನ್ನು ದೂರ ಸರಿಸಿದನು. ವಿಜಯೋತ್ಸವದಿಂದ ಮರಳಿ ಬಂದನು.

ಇತ್ತ ಮತ್ತೆ ಗರ್ವೋದ್ರೇಕದಿಂದ ಮೆರೆಯುತ್ತಿದ್ದ ಸ್ವಾದಿಯ ನಾಯಕನ ಮೇಲೆ, ಸಬ್‌ನೀಸ ಕೃಷ್ಣಪ್ಪಯ್ಯನನ್ನು ಸೈನ್ಯದೊಡನೆ ಕಳಿಸಿ ಆ ರಾಜ್ಯದ ಬಹು ಭಾಗವನ್ನು ವಶಪಡಿಸಿಕೊಂಡನು. ಸ್ವಾದಿಯ ನಾಯಕನು ವಿಜಾಪುರದ ಬಾದಶಹನ ಮೊರೆಹೊಕ್ಕನು. ಬಾದಶಹನ ದಕ್ಷಿಣ ಭಾಗದ ಸೇನಾಧಿಕಾರಿಗಳಿಗೆ, ಸರದಾರರಿಗೆ. ಹಿಂದೆ ಶಿವಪ್ಪನಾಯಕನಿಂದ ಸೋಲನ್ನು ಅನುಭವಿಸಿದ್ದುದರ ಸೇಡು ತೀರಿಸಿಕೊಳ್ಳಲಿಕ್ಕೆ ಇದೊಂದು ನೆಪ ಸಿಕ್ಕಂತಾಯಿತು. ಬಾದಶಹ ೨ನೆಯ ಅಲ್ಲೀ ಆದಿಲಶಹನು ಸ್ವಾದಿಯ ಅರಸನಿಗೆ ಸಹಾಯ ನೀಡಲು ಭರವಸೆ ಇತ್ತು, ಕೆಳದಿಯ ರಾಜ್ಯದೊಡನೆ ನಡೆಸುವ ಯುದ್ಧಗಳ ಮೇಲ್ವಿಚಾರಣೆಗೆ ಸ್ವತಃ ದಕ್ಷಿಣಕ್ಕೆ ಬಂದನು. ತಾನು ಗಡಿಯಲ್ಲಿ ನಿಂತು ಶರಜಾಖಾನ, ಬಲೂಲಖಾನ ಮುಂತಾದ ದಳಪತಿಗಳೊಡನೆ ಸರ್ವಸನ್ನಾಹದ ಸೇನೆಯನ್ನು ಆ ರಾಜ್ಯದ ಒಳಗೆ ನುಗ್ಗಿಸಿದನು.

ಇದು ದೊಡ್ಡ ಗಂಡಾಂತರವಾಗಿ ಕಂಡಿತು ಭದ್ರಪ್ಪನಾಯಕನಿಗೆ ! ಆದರೂ ಎದೆಗುಂದಲಿಲ್ಲ. ಆಪ್ತ ಮಂತ್ರಿಗಳನ್ನೂ, ಚೆನ್ನಮ್ಮಾಜಿಯನ್ನೂ ಕೂಡಿಕೊಂಡು ಆಲೋಚನೆ ಮಾಡಿದನು. ಆಗ ಚೆನ್ನಮ್ಮ ಒಂದು ತಂತ್ರವನ್ನು ಮುಂದಿಟ್ಟಳು: "ನಮ್ಮ ಬಲಾಢ್ಯ ಸೇನೆಯನ್ನು ಕಳಿಸಿ ವೈರಿಗಳನ್ನು ಓಡಿಸಲು ಯತ್ನಿಸಬೇಕು. ಅದು ವಿಫಲವಾಗುವಂತೆ ಕಂಡರೆ ನಾಶವಾಗದೆ ಹಿಂದೆ ಸರಿಯಬೇಕು. ವೈರಿಗಳ ಮಾರ್ಗಕ್ಕೆ ಎದುರಾಗುವ ರಾಜಧಾನಿಯೇ ಅವರ ಕೈವಶವಾಗುವದು. ದುರ್ದೈವದಿಂದ ಹಾಗೇನಾದರೂ ಆದರೆ, ಸರ್ವಾನರ್ಥವನ್ನು ತಪ್ಪಿಸುವದಕ್ಕೆ, ಅರಮನೆಯ ಮಂದಿಯನ್ನು, ಕೋಶವನ್ನು ಮೊದಲೇ ದುರ್ಗಕೋಟೆಯಾಗಿರುವ ಭುವನಗಿರಿಗೆ ಕಳಿಸಬೇಕು. ನೀವು ಅಲ್ಲಿದ್ದು ಯುದ್ಧಸೂತ್ರ ಹಿಡಿದು ನಡಿಸಬೇಕು. ಶತ್ರುಸೇನೆ ಆ ಕಡೆಗೂ ದಾಳಿಯಿಟ್ಟರೆ ಅವರಿಗೆ ಅಪರಿಚಿತವಾಗಿರುವ ಕಣಿವೆಯ ಮಾರ್ಗಗಳಲ್ಲಿ ಹಿಂದೆ ಮುಂದೆ ಮಾರ್ಗಕಟ್ಟಿ, ಇಕ್ಕಟ್ಟಿನಲ್ಲಿ ಸಿಕ್ಕಿಸಿ ನಾಶಮಾಡಬೇಕು." ಇದು ಎಲ್ಲರಿಗೂ ಸರಿಯೆನಿಸಿತು. ಯೋಜನೆಯಂತೆ ಕಾರ್ಯಾರಂಭವಾಯಿತು.

ವಿವೇಕಿಯೂ ಬಲಿಷ್ಠನೂ ಆದ ಜಾತಪನ ಭದ್ರಪ್ಪನೆಂಬ ದಳಪತಿಯೊಡನೆ ದೊಡ್ಡ ಥಳವೊಂದು ಬಾದಶಹನ ಸೈನ್ಯವನ್ನು ಹಿಮ್ಮೆಟ್ಟಿಸಲು

ಹೊರಟಿತು. ಅಂಬಲಿಗೊಳ್ಳದಲ್ಲಿ ಒದಗಿದ ಅತಿ ನಿಕರದ ಕಾಳಗದಲ್ಲಿ ತುರುಕರ ಆವೇಶದ ಇರಿತಗಳನ್ನು ಎದುರಿಸಲಾಗದೆ ಕೆಳದಿಯ ದಂಡು ಹಿಂದೆ ಸರಿಯಿತು. ತುರುಕರು ತೊಡಸಿಯ ಪ್ರಾಂತದಲ್ಲಿ ನುಗ್ಗಿ ಬಿದನೂರು ಪರಿಸ್ತರಣಕ್ಕೆ ಬಂದು ರಾಜಧಾನಿಯ ಮಾರ್ಗಗಳನ್ನು ಕಟ್ಟುಮಾಡಿದರು. ಅಷ್ಟರಲ್ಲಿ ಅದು ತೆರವಾಗಿತ್ತು. ಹಿಂದಿನಿಂದ ಬಂದ ಬಾದಶಹನು ಅರಮನೆ ಯಲ್ಲಿ ಇಳಿದುಕೊಂಡನು. ನಾಗರಿಕರನ್ನು ಪೀಡಿಸಲಿಲ್ಲ. ವಿಧ್ವಂಸಕ ಕೃತ್ಯಗಳನ್ನೇನೂ ಎಸಗಲಿಲ್ಲ.

ಬಾದಶಹನ ಬಲಗಳು ಭುವನಗಿರಿಯತ್ತ ಸಾಗಿದವು. ಕೆಳದಿಯ ನಾಯಕರೂ ಹುರಿಗೊಂಡು ಸನ್ನದ್ಧರಾದರು. ಚದರಿದ ತಮ್ಮ ದಳವನ್ನು ಮತ್ತೆ ಸಂಘಟಿಸಿ ಪೂರ್ವಯೋಜನೆಯಂತೆ ಅದರಲ್ಲಿ ನಾಲ್ಕು ಭಾಗ ಮಾಡಿ ತಳತಂತ್ರವನ್ನು ಬಳಸಿ ನಾಲ್ಕು ಕಡೆಯಿಂದ ಯುದ್ಧವನ್ನು ಹೂಡಿದರು. ಅರಣ್ಯಗಳಲ್ಲಿ ಅವಿತಿಟ್ಟ ಬೇಡರಪಡೆಗಳ ಸಹಾಯದಿಂದ ಮಾರ್ಗಗಳನ್ನು ನಾಶ ಮಾಡಿದರು. ಚೆನ್ನಮ್ಮ, ಸೋಮಶೇಖರ, ಭದ್ರಪ್ಪರಸು ಸ್ವತಃ ಅಶ್ವಾರೂಢ ರಾಗಿ ಸಂಚರಿಸಿ ಯುದ್ಧ ಕೌಶಲವನ್ನು ಮೆರೆದರು. ತೋಪುಗಳನ್ನು ತರಿಸಿ ಬಳಸಿ ಯವನರ ಬಲವನ್ನು ನಾಶಮಾಡಿದರು. ಅಲೀಆದಿಲಶಹನು ಹತಾಶ ನಾದನು. ಯಾವಾಗ ವಿಜಾಪುರಕ್ಕೆ ಹೋದೇನೋ ಎಂದೆನಿಸಿತವನಿಗೆ. ಅಲ್ಲಿಂದ ಹೊಸಸೇನೆಯನ್ನು ತರಿಸಿ ಹೋರಾಡುವದರಲ್ಲಿ ಪ್ರಯೋಜನವಿಲ್ಲ ವೆಂದು ಭಾವಿಸಿದನು. ಒಡಂಬಡಿಕೆಗೆ ಎಳಸಿದನು. ಅವನ ಬಯಕೆಯಂತೆ ಭದ್ರಪ್ಪನಾಯಕನು ಕಳಿಸಿದ ನಿಯೋಗದೊಡನೆ ಮಾತನಾಡಿ ಯುದ್ಧ ಪೂರ್ವದ ಪರಿಸ್ಥಿತಿಗೆ, ಅಂತರರಾಜ್ಯ ಗಡಿಗೆ ಹಿಂದಿರುಗಲು ಒಪ್ಪಿ ಒಡಂಬಡಿಕೆ ಮಾಡಿಕೊಂಡು ಹೊರಟು ಹೋದನು. ರಾಜಪರಿವಾರವು ಬಿದನೂರಿಗೆ ಮರಳಿ ಬಂದಿತು. ಚೆನ್ನಮ್ಮನ ಜಾಣ್ಮೆಯೂ ಪರಿಶ್ರಮವೂ ಪ್ರಶಂಸೆ ಪಡೆದವು. ಪ್ರಜೆಗಳಲ್ಲಿ ಆಕೆಯ ಗೌರವ ಹೆಚ್ಚಿತು.

ರಾಜ್ಯವು ನಿಷ್ಕಂಟಕವಾಯಿತೆಂದು ಭದ್ರಪ್ಪನಾಯಕನು ಧಾರ್ಮಿಕೋ-ನ್ನತಿಗೆ ಒಲಿದನು. ಲಿಂಗಪೂಜೆಯನ್ನು ನಿಷ್ಠೆಯಿಂದ ಮಾಡುತ್ತ ಶೈವ, ವೈಷ್ಣವ, ಜೈನ ಪ್ರಮುಖ ಕ್ಷೇತ್ರಗಳಿಗೂ ವೀರಶೈವ ಮಠಮಾನ್ಯಗಳಿಗೂ

ದತ್ತಿಗಳನ್ನು ಬಿಟ್ಟು ಶಾಸನಮಾಡಿಸಿದನು. ಸಕಲ ಪರಿವಾರದೊಡನೆ ತೀರ್ಥ-ಕ್ಷೇತ್ರಗಳ ಯಾತ್ರೆ ಕೈಕೊಂಡು ಧನ-ಕನಕಗಳ ವಿಪುಲ ದಾನಮಾಡಿದನು. ಕೀರ್ತಿಶಾಲಿಯಾದನು. ಆದರೆ ಅವನು ಹೀಗೆ ಎರಡು ವರ್ಷ ರಾಜ್ಯಭಾರ ಮಾಡುತ್ತಿರುವಷ್ಟರಲ್ಲಿ ಅಕಾಲಿಕವಾಗಿ ಶಿವಾಧೀನನಾದುದರಿಂದ ಬಂಧುಬಳಗವೆಲ್ಲ ಕಳವಳಪಡಬೇಕಾಯಿತು. ಅವನ ಅವಸಾನವು ನಿಗೂಢ ವಿಷಯವಾಗಿ ಉಳಿಯಿತು.

ಶಿವಪ್ಪನಾಯಕನ ಪ್ರಖರವಾದ ಆಳ್ವಿಕೆಯಲ್ಲಿ ಬಯಲಿಗೆ ಬರಲಿಕ್ಕಾಗದೆ, ಒಳಗೊಳಗೇ ಹೊಗೆಯಾಡುತ್ತಿದ್ದ ಅಸೂಯೆ-ಅಸಂತುಷ್ಟಿಗಳ ಸಂಚೊಂದು ಈಗ ಬಲಗೊಳ್ಳುತಲಿತ್ತು. ಶಿವಪ್ಪನಾಯಕನ ಶಿಸ್ತಿನಕ್ರಮಕ್ಕೆ ಒಳಗಾಗಿ ಅಧಿಕಾರ ಕಳೆದುಕೊಂಡ ಕೆಲವು ಅಧಿಕಾರಿಗಳು ಈ ಸಂಚನ್ನು ಪ್ರೋತ್ಸಾಹಿಸುತ್ತಿದ್ದರು. ಈ ಸಂಚು ಮೂಲತಃ ಶಿವಪ್ಪನಾಯಕನ ರಾಜಾಧಿಕಾರವನ್ನೇ ಒಪ್ಪದೆ ಆರಂಭವಾದದ್ದು. ವೀರಭದ್ರನಾಯಕನಿಗೆ ಸಂತಾನವಿರಲಿಲ್ಲ. ವೆಂಕಯ್ಯ, ಭದ್ರಯ್ಯ ಎಂಬಿಬ್ಬರು ಸೋದರಳಿಯಂದಿರಿದ್ದರು. ವೀರಭದ್ರನಾಯಕನಿಗೆ ಮೂರುತಲೆಮಾರಿನ ಹಿಂದಿನ ಬಂಧುತ್ವ ಸಂಬಂಧಿಯಾದ ಶಿವಪ್ಪನಾಯಕನಿಗಿಂತಲೂ ತಮ್ಮ ಸೋದರಮಾವನಿಗೆ ನಿಕಟಸಂಬಂಧಿಗಳೆಂದು, ತಮಗೇ ರಾಜ್ಯಾಧಿಕಾರ ದೊರೆಯಬೇಕಾಗಿತ್ತೆಂದು ಅವರಿಬ್ಬರು ಅಸಂತುಷ್ಟರಾಗಿದ್ದರು. ಅವರಲ್ಲಿ ಅಪರಿಮಿತ ಧನಸಂಗ್ರಹವಿತ್ತು. ಅದರಿಂದಲೂ ಪದಚ್ಯುತ ಅಧಿಕಾರಿಗಳು, ಸ್ವಾರ್ಥಿಗಳು ಇವರನ್ನು ಕೂಡಿಕೊಂಡಿದ್ದರು, ಇವರೆಲ್ಲರ ಒಂದು ಕುಹಕಕೂಟವಾಗಿತ್ತು. ಇದರ ಬೆಳವಣಿಗೆಯಲ್ಲಿ ಭದ್ರಪ್ಪನಾಯಕನ ಅಕಾಲಿಕ ಅವಸಾನಕ್ಕೆ ಕಾರಣವೇನೆಂಬುದು ತಿಳಿಯದೆ ಮುಳುಗಿಹೋಯಿತು. ದಿನದಿನಕ್ಕೆ ಪ್ರಬಲವಾದ ಈ ಕುಹಕಿಗಳ ಪೆಟ್ಟು ಮುಂದೆ ಚೆನ್ನಮ್ಮಾಜಿಯ ಬಾಳಬಳ್ಳಿಯನ್ನೇ ಕತ್ತರಿಸಿದುದು ದುರ್ದೈವದ ಮಾತಾಯಿತು.

ಭದ್ರಪ್ಪನಾಯಕನ ಸಾವು ಸಂಚುಗಾರರ ಇಚ್ಛೆಗೆ ಅನುಗುಣವಾಗಿಯೇ ಇತ್ತು. ಹಿಂದಿನ ನಾಯಕನಿಗೆ ಸ್ತ್ರೀಸಂತಾನದಿಂದ ಸಮೀಪದ ಹಕ್ಕುದಾರನೆಂದು ವಾದಿಸುತ್ತಿದ್ದ ಹಿಂದೆ ಹೇಳಿದ ವೆಂಕಟಯ್ಯನನ್ನು ಶಿವಪ್ಪನಾಯಕನು

ಹೊಸ ಅಂಗಡಿ ಪರಿಸ್ತರಣದ ದಿಗ್ಬಂಧನದಲ್ಲಿ ಇಟ್ಟಿದ್ದನು. ವೆಂಕಟಯ್ಯನು ಕುರುಡನಾಗಿದ್ದರೂ ಕುಟಿಲನೀತಿಯಲ್ಲಿ ಪ್ರವೀಣನಾಗಿದ್ದನು. ಕುಹಂಕಿಗಳು ಅವನನ್ನು ಮುಂದುಮಾಡಿಕೊಂಡು, ಭದ್ರಪ್ಪನಾಯಕನ ಮರಣದ ಈ ಸಂಧಿಯನ್ನು ಉಪಯೋಗಿಸಿಕೊಂಡು ಬಂಡು ಹೂಡಲು ಯೋಚಿಸಿದರು. ಆದರೆ ಬಹುತರ ಕೋಟೆಗಳ ಕೊತವಾಲರು ರಾಜನಿಷ್ಠರಾಗಿಯೇ ಇದ್ದುದರಿಂದ ಅವರ ಇಚ್ಛೆ ಈಡೇರುವಂತೆ ಇರಲಿಲ್ಲ.

ಭದ್ರಪ್ಪನಾಯನಿಕ ಮಕ್ಕಳಿರಲಿಲ್ಲ. ಬೊಮ್ಮಮ್ಮಾಜಿ, ಸಿದ್ಧಮ್ಮಾಜಿ ಈ ಇಬ್ಬರು ರಾಣಿಯರು ಪತಿಯ ಕಳೇವರದೊಂದಿಗೆ ತಾವೂ (ಜೀವಂತ) ಸಮಾಧಿ ಸೇರಲು ಸಿದ್ಧರಾದರು. ಚೆನ್ನಮ್ಮಾಜಿಗೆ ಇದು ಒಪ್ಪಿಗೆಯಾಗಿರಲಿಲ್ಲ. ಧಾರ್ಮಿಕ ಪೂಜಾಕ್ರಿಯೆಗಳಲ್ಲಿ ಸದಾಚಾರದಲ್ಲಿ ಪತಿಯ ಸ್ಮರಣೆಗೆ ಸೇವೆಸಲ್ಲಿಸುವದೂ, ಅವನ ಜೀವನದ ಧ್ಯೆಯೋದ್ದೇಶಗಳ ಸಾಧನೆಗಾಗಿ ಪರಿಶ್ರಮಿಸುವದೂ ಪತಿವ್ರತಾ ಧರ್ಮದ ಕುಂದಿಲ್ಲದ ರೀತಿಯೇ ಆಗಿದೆಯೆಂದು ಆಕೆಯು ಆ ಅಕ್ಕಂದಿರ ಮನಒಲಿಸಿ ಉಳಿಸಿಕೊಳ್ಳಲು ಯತ್ನಿಸಿದಳು. ಆ ಪತಿಪ್ರಾಣೆಯರು ತಮ್ಮ ನಿರ್ಧಾರವನ್ನು ಬದಲಿಸಲಿಲ್ಲ. ಈ ರಾಜಮನೆದಲ್ಲಿ ಹಿಂದೆಯೂ ಕೆಲವು ರಾಣಿಯರು ಹೀಗೆ ಮಾಡಿದ ಉದಾಹರಣೆ ಇದ್ದುದರಿಂದ* ಉಳಿದವರೂ ಉಪಾಯವಿಲ್ಲದೆ ಸುಮ್ಮನಾದರು. ಆದರೆ ಚೆನ್ನಮ್ಮ ಕಳವಳಗೊಂಡು ಕಣ್ಣೀರ ಕರೆದಳು.

ಹಿರಿಯ ಮಂತ್ರಿಮಾನ್ಯರು, ದಂಡನಾಯಕರು, ಪ್ರಜಾಪ್ರಮುಖರು ಸೇರಿ ಭದ್ರಪ್ಪರಾಜನ ತಮ್ಮ ಸೋಮಶೇಖರನಾಯಕನಿಗೆ ಬಿದನೂರ ಅರಮನೆಯಲ್ಲಿ ಪಟ್ಟಾಭಿಷೇಕೋತ್ಸವನ್ನು ನೆರವೇರಿಸಿದರು. (ಕ್ರಿ. ಶ. ೧೬೬೪) ಅವನ ಪತ್ನಿ ಚತುರಳೂ ಕರುಣಾಳುವೂ ಆಗಿ ಸರ್ವರ ಪ್ರೀತ್ಯಾದರಗಳಿಗೆ ಪಾತ್ರಳೂ ಆಗಿದ್ದಳು. ಈ ರಾಜರಾಣಿಯರು ಪ್ರಜೆಗಳ ನಂಬಿಗೆಗೆ ಪಾತ್ರರಾಗಿ ರಾಜ್ಯಭಾರವನ್ನು ಕೈಕೊಂಡರು.

---

* 'ಕೆಳದಿನೃಪವಿಜಯ' ಕಾವ್ಯವನ್ನು ಸಂಪಾದಿಸಿ ಪ್ರಕಟಿಸಿದ ಶ್ರೀಮಾನ್ ಶ್ಯಾಮಶಾಸ್ತ್ರಿ ಅವರು ತಾವು ಪರಿಶೀಲನೆಗೆ ದೊರಕಿಸಿಕೊಂಡಿದ್ದ ಪ್ರತಿಗಳಲ್ಲಿ 'ಕ' ಎಂಬ ಪ್ರತಿಯಲ್ಲಿ ದೊರೆಯುವ ಇಂತಹ ಕೆಲವು ರಾಣಿಯರ ಸಹಸಮಾಧಿಯಾದುದನ್ನು ಪ್ರಕಟಿತ ಗ್ರಂಥದ ಅಡಿಟಿಪ್ಪಣಿಯಲ್ಲಿ ಕೊಟ್ಟಿರುತ್ತಾರೆ. (ಕೆ. ನೃ. ವಿ. ಪುಟ ೭೫, ೧೦೫, ೧೧೭, ೧೨೪.)

ಇತ್ತ ಕುಹಕಿಗಳ ಯತ್ನ ನಿಂತಿರಲಿಲ್ಲ. ಸುವ್ಯವಸ್ಥೆ ಸಂಘಟನ ಸಜ್ಜನರಿಗೆ ಬೇಕಾಗುತ್ತವೆ. ಅವ್ಯವಸ್ಥೆ, ಅಶಾಂತಿಗಳು ದುಷ್ಟರಿಗೆ ಸ್ವಾರ್ಥಿಗಳಿಗೆ ಬೇಕಾಗುತ್ತವೆ. ಅಧಿಕಾರಭ್ರಷ್ಟರೂ ಅಂಧಕವೆಂಕಟಯ್ಯನ ಅನುಯಾಯಿಗಳೂ ಕೂಡಿರುವ ಕುತ್ಸಿತ ಜನರ ಸಮುದಾಯವು, ಶಿವಪ್ಪನಾಯಕನ ಸಂತಾನವನ್ನು ನಾಶಮಾಡಿ ಸಿಂಹಾಸನವನ್ನು ಅಪಹರಿಸುವ ಹಾಗೂ ಅದಕ್ಕಾಗಿ ವೈರಿರಾಜರ ನೆರವನ್ನಾದರ ಪಡೆಯುವ ದುರಾಲೋಚನೆ ನಡಿಸಿದ್ದಿತು. ತರ್ಕಕ್ಕೆ ಪ್ರಭಾವಶಾಲಿಗಳಾದ ರಾಜದಂಪತಿಗಳ ಮುಂದೆ ಅವರ ಆಟ ನಡೆಯುವಂತಿರಲಿಲ್ಲ. ಹಾಗೆಂದು ಅವರು ಹಿಂಜರಿಯಲೂ ಇಲ್ಲ. ಅದಕ್ಕೆ ಕೆಲವು ದಿವಸ ಹಿಡಿಯಿತು ಅಷ್ಟೆ.

ಕೆಳದಿಯ ಅರಸರು ಹೊಸಬರಾದಾಗಲೆಲ್ಲ ಮೈಸೂರರಸರು ದಂಡೆತ್ತಿ ಬರುವ ಸಂಧಿಸಾಧಕತನವನ್ನು ಅವರು ಬಿಟ್ಟಿರಲಿಲ್ಲ. ಈಗಲೂ ಹಾಗೆ ದಾಳಿ ನಡಿಸಿದರು. ಕೂಡಲೆ ಸೋಮಶೇಖರನಾಯಕನು ಪ್ರಬಲವಾದ ಸೇನೆಯೊಡನೆ ಅವರ ಸಮಾಚಾರಕ್ಕೆ ಬಂದನು. ಅವರನ್ನು ಸೋಲಿಸಿ ಚಿಕ್ಕೋಡು, ಬೆಳಗೋಡು, ಕಣತೂರು, ಅಬ್ಬಣವೆ, ಬೇಲೂರುಗಳನ್ನು ವಶಪಡಿಸಿಕೊಂಡನು. ರಾಜ್ಯವನ್ನು ವಿಸ್ತರಿಸಿದನು.

ರಾಜ್ಯದ ಗಡಿಗಳಲ್ಲಿ ಅಲ್ಲಲ್ಲಿ ಗರ್ವೋದ್ರೇಕದಿಂದ ಮಲೆತು ನಿಂತ ವೈರಿಗಳನ್ನೆಲ್ಲ ಬಗ್ಗಿಸಿ, ಅವರಲ್ಲಿ ಕೆಲವರನ್ನು ಕ್ಷಮಿಸಿ ಕರುಣೆಯಿಂದ ಪೋಷಿಸಿದನು. ರಾಜನು ದಂಡಯಾತ್ರೆಯನ್ನು ಕೈಕೊಂಡಿರುವ ದೀರ್ಘಕಾಲದಲ್ಲಿ ಹಿಂದೆ ರಾಜಧಾನಿಯಲ್ಲಿ ರಾಜ್ಯದ ಆಡಳಿತವನ್ನು ನೋಡಿಕೊಳ್ಳುವ ರಾಜವಂಶೀಯ ಹಿರಿಯರು ಯಾರೂ ಇರಲಿಲ್ಲವಾದ್ದರಿಂದ ಚೆನ್ನಮ್ಮಾಜಿಯೇ ಆ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದಳು.

ಸೋಮಶೇಖರನಾಯಕನಿಗೆ ಚೆನ್ನಮ್ಮಾಜಿ ಒಬ್ಬಳೇ ಪತ್ನಿ! ಇದು ಆ ರಾಜಮನೆತನದ ಸಂಪ್ರದಾಯಕ್ಕೆ ಹೊರತಾಗಿತ್ತು. ಹಾಗೂ ಆ ದಂಪತಿಗಳಲ್ಲಿಯ ನಿರತಿಶಯ ಪ್ರೇಮಕ್ಕೆ ನಿದರ್ಶನವಾಗಿತ್ತು. ಆ ಧೀರೋದಾತ್ತ ಆಳಿಕೆಯಲ್ಲಿ, ಆ ಸುಂದರ ಸಂಸಾರದಲ್ಲಿ ಐದಾರು ವರ್ಷಗಳು ಕಳೆದಿದ್ದವು. ಇನ್ನೂ ಅವರಿಗೆ ಮಕ್ಕಳಾಗಿರಲಿಲ್ಲ.



## ೩. ಅಳಲಿನ ಆಳದಿಂದ....

ಮುಂದೆ ಚೆನ್ನಮ್ಮಾಜಿಯು ಪಾಲಿನ ದುರ್ದಿನಗಳು ಒದಗಿಬಂದವು. ರಾಜ ದಂಪತಿಗಳ ಮದುವೆಯಲ್ಲಿ ಪ್ರಪ್ರಥಮ ಪಾತ್ರವಾಡಿದ ಭರಮೆ ಮಾಪುತನೇ ರಾಣಿ ಚೆನ್ನಮ್ಮಾಜಿಯು ಮಾಧುರ ಜೀವನದಲ್ಲಿ ಕಹಿ ಕಲಸಿದುದು ವಿಧಿವಿಲಾಸವಲ್ಲದೆ ಮತ್ತೇನಲ್ಲ.

ಒಂದು ದಿನ ಮಾಧ್ಯಾಹ್ನ ಸೋಮಶೇಖರನಾಯಕ ದಿನದ ಹೊತ್ತಿಗೆ ಅರಮನೆಗೆ ಬರಲಿಲ್ಲ, ರಾಣಿಯು ಕೆಲವು ವೇಳೆ ಕಾದು ಅರಮನೆಯ ಉಸ್ತುವಾರಿ ಅಧಿಕಾರಿ ಮಲ್ಲಪ್ಪಯ್ಯನನ್ನು ಕರೆಯಿಸಿ ಕೇಳಿದಳು. 'ನನಗೇನೂ ಗೊತ್ತಿಲ್ಲ ಅಮ್ಮಾಜಿ. ತಿಳಿದುಕೊಂಡು ಬರುತ್ತೇನೆ' ಎಂದು ಆತನು ಅವಸರದಿಂದ ತನ್ನ ತೇಜಿಯನ್ನೇರಿ ಕರಣಿಕ ಸುಬ್ಬಯ್ಯನ ಮನೆಗೆ ಹೋಗಿ ವಿಚಾರಿಸಿದನು. 'ಅವರಿಂದು ಓಲಗದ ಚಾವಡಿಗೆ ಬರಲೇ ಇಲ್ಲ; ಹೆಚ್ಚಿನದೇನೂ ನನಗೆ ತಿಳಿಯದು' ಎಂದು ಸುಬ್ಬಯ್ಯ ಹೇಳಿದನು. ಹಾಗೆಯೇ ಮಲ್ಲಪ್ಪಯ್ಯನು ಪ್ರಧಾನಿ ನರಸಪ್ಪಯ್ಯನ ನಿವಾಸಕ್ಕೆ ಹೋದನು. ನರಸಪ್ಪಯ್ಯನನ್ನು ಕೇಳಲು ಅವನು "ಚಾವಡಿಯಲ್ಲಿ ಒಡೆಯರ ಬರುವಿಗಾಗಿ ಕಾದಿದ್ದೆವು. ಬರಲೇ ಇಲ್ಲ. ರಾಜ್ಯಕಾರ್ಯಾಚರಣೆಯಲ್ಲಿ ಅವರ ಕೆಲವು ಆಜ್ಞೆಗಳ ಅಗತ್ಯವಿತ್ತು. ಬಹಳ ಹೊತ್ತಿನ ಮೇಲೆ ಅವರು ಗ್ರಾಮಾಂತರ ಪಯಣ ಹೋಗಿದ್ದಾರೆಂದು ತಿಳಿಯಿತು. ಎಲ್ಲಿಗೆ? ಏಕೆ? ಎಂಬುದು ನಿಮಗೇ ತಿಳಿದಿರಬೇಕೆಂದು ಭಾವಿಸಿದ್ದೆ." ಎಂದನು.

"ಇಲ್ಲ ಸ್ವಾಮೀ, ನಮಗೇನೂ ತಿಳಿಯದು. ಅಮ್ಮಾಜಿ ಅವರು ಕಾತುರದಿಂದ ಕೇಳಿತಿದ್ದಾರೆ. ಅವರ ಮನಕ್ಕೆ ತುಂಬ ಆತಂಕ;" ಮಲ್ಲಪ್ಪಯ್ಯನು ತಡವರಿಸುತ್ತ ಹೇಳಿದನು. ನರಸಪ್ಪಯ್ಯನಿಗೂ ಗಾಬರಿಯಾಯಿತು. ಆ ಪ್ರಧಾನಿ ಕೂಡಲೆ ಹೊರಗೆ ಬಂದನು, "ನೀನು ಅರಮನೆಗೆ ನಡೆ. ನಾನು ವಿಚಾರಿಸಿಕೊಂಡು ತಿಳಿಸುತ್ತೇನೆಂದು ಅಮ್ಮಾಜಿಯವರಿಗೆ ಹೇಳು." ಎಂದು

ಮಲ್ಲಪ್ಪಯ್ಯನನ್ನು ಕಳಿಸಿ, ನಾಲ್ಕುಜನ ಪಸಾಯಿತರನ್ನು ಕರೆದು ನಾಯಕರ ಪ್ರಯಾಣದ ವಿವರಣೆ ಪಡೆಯಲು ಅಶ್ವಶಾಲೆ–ಗಜಶಾಲೆಗಳ ಕಡೆಗೆ ಕಳಿಸಿದನು. ಸಂಜೆಗೆ ಸಮಾಚಾರ ಅರಮನೆಗೆ ತಲುಪಿತು. ನಾಯಕರು ಜಲಪಾತ ಉಪವನದ ವಿಹಾರಕ್ಕಾಗಿ ಹೋಗಿದ್ದಾರೆಂದು ! ಚೆನ್ನಮ್ಮನಿಗೆ ಆಶ್ಚರ್ಯ ವಾಯಿತು; ದುಃಖವೂ ಆಯಿತು. ಇಂತಹ ವಿಹಾರಗಳಿಗೆ ತನ್ನನ್ನು ಬಿಟ್ಟು ಎಂದೂ ಹೋದವರಲ್ಲ ತನ್ನ ಪತಿ ! ಸಂಗಡ ಹೋದವರಾದರೂ ಯಾರು ? ಭರಮ ಮಾವುತನಲ್ಲದೆ, ವಸೂದ, ಗಿಲ್ಲಾಳಜೆಟ್ಟಿ, ಬೇಟೆಗಾರ ಬೇಡರ ಮುದ್ದ ಮುಂತಾದ ಹೀನವೃತ್ತಿಯ ಜನ ! ಹೋದದ್ದು ಎರಡು ಹರದಾರಿ ದೂರಕ್ಕೆ; ಇದನ್ನು ಕೇಳಿ ಆಕೆಯ ಮನಸ್ಸು ಗಾಬರಿಗೊಂಡಿತು. ಅದುವರೆಗೆ ಉದರಕ್ಕೆ ಅನ್ನವಿಲ್ಲ. ಇನ್ನು ಮೇಲೆ ಸಾಧ್ಯವೇ ? ಊಟವಿಲ್ಲ, ನಿದ್ರೆಯಿಲ್ಲ, ಹಾಸಿಗೆಯಲ್ಲಿ ಉರುಳಿ ಕಣ್ಣೀರು ಕರೆದಳು. ಪರಿಚಾರಿಕೆಯರ ಸಾಂತ್ವನದ ಮಾತುಗಳು ಸಫಲವಾಗಲಿಲ್ಲ. ರಾತ್ರಿಯೆಲ್ಲ ಆಲೋಚಿದಳು. ಬೆಳಗಾಯಿತು. ಶಿವಾರ್ಚನೆಗೈದು ತೀರ್ಥಪಾನಮಾಡಿ ಪ್ರಸಾದವಿಲ್ಲದೆ ದುಮ್ಮಾನದಲ್ಲಿ ಕುಳಿತಳು. ನರಸಪ್ಪಯ್ಯ ಬಂದು ಭೆಟ್ಟಿಯಾದನು. ಕಳೆದ ರಾತ್ರಿ, ಬೇರೆ ಕೆಲವು ಭಟರನ್ನು ರಕ್ಷಣೆಗಾಗಿ ವಿಹಾರವನಕ್ಕೆ ಕಳಿಸಿದ್ದನ್ನು ತಿಳಿಸಿದನು. ಆಕೆ ಅಳುಕಿದೆಯುವಳಲ್ಲ. ಅಂತರಂಗದ ಪತ್ನೀಭಾವದ ದುಃಖಕ್ಕೆ ಪ್ರಧಾನಿಯ ಈ ಉಪಾಯದಿಂದ ಪರಿಹಾರ ದೊರೆಯಲಿಲ್ಲ. ಆದರೂ ಅದನ್ನು ಹತ್ತಿಕ್ಕಿ ಕೊಂಡು ಆತನೊಡನೆ ಆಲೋಚನೆ ನಡಿಸಿ, ಕುಹಕಿಗಳ, ಕುತಂತ್ರಿಗಳ ಮೇಲೆ ಜಾಗರೂಕತೆಯಿಂದ ಕಣ್ಣಿಡಬೇಕೆಂದು ಎಚ್ಚರಿಕೆ ಇತ್ತಳು. ಸಂಜೆಗೆ ಹೋದವ ರೆಲ್ಲ ಮರಳಿ ಬಂದರು.

ಸೋಮಶೇಖರರಾಜ ಮಹಾಶಯನು ಅರಮನೆಗೆ ಬಂದನು. ಮೊಗ ದಲ್ಲಿ ಎಂದಿನಂತೆ ನಸುನಗೆಯಿಲ್ಲ. ತಾಮಸದ ಛಾಯೆ ಮೋರೆಯ ಮೇಲೆ ಮೂಡಿತ್ತು. ಓರಣವಿಲ್ಲದ ಉಡಿಗೆಯಲ್ಲಿ ಒಳಗೆ ಬಂದ ರಾಜನನ್ನು ಉಪ ಚರಿಸಲು ರಾಣಿ ಮುಂದೆ ಬಂದಳು. ನಾಯಕನು ಅವಳನ್ನು ಬದಿಗೆ ತಳ್ಳಿ "ನೀವೇನೂ ನಮ್ಮ ಕೆಲಸದಲ್ಲಿ ಕೈಹಾಕಬೇಡಿರಿ." "ಹೆಂಗಸರೇಕೆ ನಿಮ್ಮ ಕೆಲಸ ದಲ್ಲಿ ಬರಬೇಕು ? ಎಂದು ಗೆಳೆಯರು ಕೇಳತಾರೆ ನನ್ನ ! ನೀವು ಹೆಂಗಸರು.

ನಿಮ್ಮ ಕೆಲಸ ನಿಮಗೆ, ನಮ್ಮ ಕೆಲಸ ನಮಗೆ" ಎನ್ನುತ್ತ ತಲೆ ತಿರುಗುತ್ತಿತ್ತೇನೋ ಜೋಲೀ ಹೊಡೆಯುತ್ತ ಹೋಗಿ ಅದೇ ಬಟ್ಟೆಗಳಲ್ಲಿ ಪರ್ಯಂಕದ ಮೇಲೆ ಬಿದ್ದನು. ಸಮಯೋಚಿತ ಪ್ರಜ್ಞೆ ಚೆನ್ನಮ್ಮಾಜಿಯದು. ಗಾಬರಿಯಿಂದ ಬುದ್ಧಿ ಕಳೆದುಕೊಳ್ಳದೆ ಸಾವಧಾನದಿಂದ ನುಡಿದಳು :

"ಇಲ್ಲ ನಾವೇನೂ ನಿಮ್ಮ ಕೆಲಸದಲ್ಲಿ ಕೈಹಾಕುವದಿಲ್ಲ. ನಿಮ್ಮ ಸೇವೆ ಮಾಡುತ್ತೇವೆ. ನಾವು ಹೆಂಗಸರು, ಪತಿ ಸೇವೆ ನಮ್ಮ ಕೆಲಸ" ಎನ್ನುತ್ತ ಹಣೆಯ ಮೇಲೆ ಕೈಯಿಟ್ಟಳು. ಹೊಟ್ಟೆ ಗಡಬಡಿಸುತ್ತಿತ್ತೇನೋ ಕಿವುಚಿದ ಮುಖದಿಂದ ಆತ "ಅದೇ ಅಂದೆ ನಾನು ಆಂ" ಎಂದು ಸತಿಗೆ ಪ್ರತಿಯಾಗಿ ಹೇಳುತ್ತಿರುವಾಗ ಆ 'ಆಂ' ದೊಡನೆ ಕಿತ್ತಿಬಂದು ದಡದಡ ವಾಂತಿಯಾಯಿತು. ಹೊರಬಂದ ಮಾದಕ ವಸ್ತುಗಳ ವಾಸನೆ ಅರಮನೆಯಲೆಲ್ಲ ತುಂಬಿತು. ಚೆನ್ನಮ್ಮ ಸೊಂಟಕ್ಕೆ ಸೆರಗು ಸಿಕ್ಕಿಸಿ ಸೇವಕರನ್ನು ದೂರನಿಲ್ಲಿಸಿ ಅವರಿಂದ ನೀರು ತರಿಸಿ ಅದನ್ನೆಲ್ಲ ತಾನೇ ಬಳಿದು ತೆಗೆದಳು. ಕಣ್ಮುಚ್ಚಿ ತೇಗುತ್ತಿದ್ದ ರಾಜ ಆಯಾಸ ಕಡಿಮೆಯೆನಿಸಿ ಕಣ್ಣು ತೆರೆದನು :

"ಚೆನ್ನಾ"

"ಓ ಸ್ವಾಮೀ"

"ನೀನು ಅದೇ ಚೆನ್ನಾ ?"

"ಹೌದು; ನೀವೂ ಅದೇ ನನ್ನ ದೇವರು !"

"ಅಲ್ಲ, ನಾನು ಬದಲಾಗಿದ್ದೇನೆ"

"ನನಗೇನೂ ಹಾಗೆ ಕಂಡಿಲ್ಲ ಸ್ವಾಮಿ ?"

"ಊಂ" ಎಂದು ದೃಷ್ಟಿಯನ್ನು ಕಾಲಕಡೆಗೆ ಹೊರಳಿಸಿದನು.

ರಾಣಿಯೂ ಸೇವಕರೂ ಕೂಡಿ ರಾಜನನ್ನು ಬಚ್ಚಲಕ್ಕೆ ಕರೆದೊಯ್ದು ಸ್ವಚ್ಛವಾಗಿ ಸ್ನಾನ ಮಾಡಿಸಿದರು. ಬಳಿಕ ಭೋಜನ ಮಂದಿರದಲ್ಲಿ ಚೆನ್ನಮ್ಮ ಮಮತೆಯಿಂದ ಪತಿಗೆ ಸವಿಯೂಟಗಳನ್ನು ಉಣಬಡಿಸಿದಳು. ಆಗ ತನ್ನ ಪ್ರಿಯಪತ್ನಿಯ ಮುಖ ನೋಡಲು, ಪತಿ ನಾಚಿಕೆಪಡುತ್ತಿದ್ದುದನ್ನು ಅರಿತು ಚೆನ್ನಮ್ಮ ಅವನ ಮುಂದಿರದೆ ಬದಿಬದಿಯಲ್ಲಿದ್ದು ಎಡೆಮಾಡಿ ತೃಪ್ತಿಪಡಿಸಿದಳು. ಬೇರೊಂದು ಶಯನಗೃಹದ ಮೆಲ್ವಾಸಿಗೆಯಲ್ಲಿ ಮಲಗಿಸಿ ಸೇವೆ ಮಾಡಿದಳು. ಅರಸನ ಅವಸ್ಥೆಗೆ ಪರಿಚಾರಿಕೆಯರೆಲ್ಲ ಮರೆಮರೆಗೆ ಕಣ್ಣೀರ

ಕರೆದರು. ಅರಸಿಗೆ ಆಳುವದಕ್ಕೆ ಅವಕಾಶವೇ ಇರಲಿಲ್ಲ. ಅದು ಆಕೆಯ ಸ್ವಭಾವವೂ ಅಲ್ಲ. ಬೆಳಗಾಗಲೆದ್ದಾಗ ಸೋಮಶೇಖರನಾಯಕನ ಹೃದಯ ಮೃದುವಾಗಿತ್ತು. ಮಡದಿಯ ಗುಣಗಾಂಭೀರ್ಯಕ್ಕೆ ತಲೆಬಾಗಿತ್ತು.

ನಿನ್ನೆಯ ಘಟನೆಯ ಹಿನ್ನೆಲೆಯಲ್ಲಿ ಏನು ನಡೆದಿದೆ ? ಅದನ್ನು ಪ್ರತಿಬಂಧಿಸಲು ಉಪಾಯವೇನು ? ಎಂಬುದಕ್ಕೆ ಚಡಪಡಿಕೆಯಾಯಿತು ಚೆನ್ನಮ್ಮನಿಗೆ ! ನಿನ್ನೆಯ ಘಟನೆಯಲ್ಲಿ ಭರಮೆ ಮಾವುತ ಮುಖ್ಯನಾಗಿದ್ದಾನೆ. ದೊರೆಗಳು ಬಾಲ್ಯದಲ್ಲಿ ಇವನೊಡನೆ ಇರಿಸಿದ್ದ ಸಲುಗೆಯ ಸ್ನೇಹವನ್ನು ಅರಸಾದ ಮೇಲೆಯೂ ಮುನ್ನಿನಂತೆ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಆ ಸಲುಗೆಯ ದುರುಪಯೋಗವಾಗಿರಬಹುದೇ? ಎಂಬ ಸಂದೇಹವೂ ರಾಣಿಗೆ ಉಂಟಾಗದಿರಲಿಲ್ಲ. ಆಪ್ತಸೇವಕರನ್ನು ಬರಮಾಡಿಕೊಂಡು ಸಲಹೆ ಪಡೆದು, ತನ್ನ ಗೂಢಚಾರರನ್ನು ಈ ಬಗೆಗೆ ಇರುವ ರಹಸ್ಯ ಸಂಗತಿಗಳನ್ನು ತಿಳಿಯಲು ನೇಮಿಸಿದಳು. ಕೊನೆಗೆ ಖಚಿತವಾಗಿ ಗೊತ್ತಾದ ವಿವರ ಹೀಗಿತ್ತು :

ಕೆಲವು ದಿನಗಳ ಹಿಂದೆ ಒಂದು ದಿನ ವ್ಯಾಯಾಮ ಶಾಲೆಯಲ್ಲಿ ಸಾಧನೆ ಮಾಡಿದ ಬಳಿಕ ಸೋಮಶೇಖರನಾಯಕನು ಗರಡೀಮನೆಯ ಮಂಟಪದಲ್ಲಿ ಮಲ್ಲರಿಂದ ಮೈಯುಜ್ಜಿಸಿಕೊಳ್ಳುತ್ತಿದ್ದನು. ಆಗ ಅವನೊಡನೆ ವ್ಯಾಯಾಮ ಮಾಡಿದ ಕೆಲವು ಜಟ್ಟಿಗಳು, ಯೋಧರು ದೊರೆಯ ಮುಂದೆ ಕುಳಿತು ಬಾಹುವೀರದ ಮಾತನಾಡುತ್ತ ಉತ್ಸಾಹಪಡುತ್ತಿದ್ದರು. ಇತ್ತೀಚೆಗೆ ಭರಮೆ ಮಾವುತ ಬಂದು ಅರಸರ ಹತ್ತಿರ ಕೂಡ್ರಹತ್ತಿದನು. ರಾಜರ ಸ್ನೇಹಿತನವನು. ಅಲ್ಲಿ ಅವನಿಗೆ ಗೌರವ ದೊರೆಯುತ್ತಿತ್ತು. ಆ ದಿನ ಮಲ್ಲನು ಎಣ್ಣೆಹೊಸಿ ನಾಯಕನ ಮೈ ತಿಕ್ಕುವಾಗ ತಮ್ಮ ತೋಳು ಮುಂಡೆಗಳಲ್ಲಿ ತೊಡೆ-ಪಿಂಡರಿಗಳಲ್ಲಿ ಹುರಿಕಟ್ಟಾಗಿರುವ ಸ್ನಾಯು-ಖಂಡಗಳನ್ನು ಅರಳಿದ ಮುಖದಿಂದ ಅಭಿಮಾನದಿಂದ ನಾಯಕನು ನೋಡಿಕೊಳ್ಳುತ್ತಿದ್ದನು. ಇದನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದ ಭರಮೆ ಮಾವುತನು ಇದೇ ಸಮಯವೆಂದು, "ದೊರೆಗಳೆ ಒಂದು ಪದಾರ್ಥವನ್ನು ಸೇವಿಸಿದರೆ ನಿಮ್ಮ ಶರೀರವು ವಜ್ರವಾಗುವದು" ಎಂದನು.

"ಏನದು?" ಎಂದನು ನಾಯಕ ಸೋಮಶೇಖರ.

"ಆನೆಯ ಮದೋದಕ. ಅದು ಅತ್ಯಂತ ಶಕ್ತಿಶಾಲಿ, ಉದರಕ್ಕೆ ಸ್ವಲ್ಪ ಜಡವಾದುದು. ಮೊದಲು ತೊಟ್ಟುತೊಟ್ಟಾಗಿ ಹಾಲಿನಲ್ಲಿ ಬೆರಿಸಿ ಸೇವಿಸಿ ಅರಗಿಸಿ ರೂಢಿ ಮಾಡಬೇಕು. ಇವರೆಲ್ಲ ಹೀಗೆ ಮಾಡುತ್ತಿದ್ದಾರೆ–ನೋಡಿರಿ" ಎಂದು ಕೆಲವರತ್ತ ಕೈಮಾಡಿ ನುಡಿದ ಭರಮೆ.

"ಹೀಗೋ?" ಎಂದು ನಸುನಕ್ಕು ಸುಮ್ಮನಾದ ದೊರೆ. ಇದರಲ್ಲಿ ಅರ್ಧ ಸಮ್ಮತಿ ಅಡಗಿತ್ತು. ಮರುದಿನ ಭರಮೆಮಾವುತ ಆ ವೇಳೆಗೆ ಹಾಲಿನಲ್ಲಿ ಗಜದ ಮದೋದಕವನ್ನು ಬೆರಿಸಿ ತಂದು ಆಗ್ರಹದಿಂದ ಒಪ್ಪಿಸಿ ಕುಡಿಸಿಬಿಟ್ಟನು. ಅರಸನ ಮೈಮನಗಳಿಗೆ ಕಿಂಚಿತ್ ಉತ್ತೇಜನವೆನಿಸಿದಂತಾಯಿತು. ಎರಡು–ಮೂರು ದಿನ ಕಳೆಯುವದರೊಳಗಾಗಿ ಅರಸು ತಾನೇ ಬಯಸಿ ತರಿಸಹತ್ತಿದನು. ಅಲ್ಲಿ ಸಾಮೂಹಿಕ ಸೇವನೆಯೂ ನಡೆಯಿತು. ಭಿನ್ನ ರುಚಿಗಾಗಿ ಆ ಕೀಳು ಜನರು ಅದರಲ್ಲಿ ಕಳ್ಳು ಕೂಡಿಸಿ ಕೊಡುತ್ತ ಅರಸನಿಗೆ ಅದೊಂದು ಚಟವಾಗಿಸಿಬಿಟ್ಟರು. ಎರಡು ವಾರಗಳ ಅದರ ಬೆಳವಣಿಗೆಯೇ ಜಲಪಾತವನದ ನಿನ್ನೆಯ ವ್ಯಸನಿಗಳ ಕೂಟದ ಆಚರಣೆ! ಮಿತಿಮೀರಿದ ಸೇವನೆ.

ಇದುವರೆಗೆ ರಾಣಿಗೆ ಇದಾವುದರ ಸುಳಿವು ಹತ್ತಿರಲಿಲ್ಲ. ಹಿರಿಯ ಗೂಢಚಾರ ರಹಸ್ಯವಾಗಿ ವಿವರಿಸಿದ ಈ ವರದಿಯನ್ನು ಕೇಳಿ ಆಕೆಯು ಹಣೆಗಟ್ಟಿಸಿಕೊಂಡು 'ಅಯ್ಯೋ ಶಿವನೆ' ಎಂದು ಗೋಗರೆದಳು. ವಿಷಾದದಿಂದ ಕೆಲವು ನಿಮಿಷ ಮೌನವಾಗಿ ಕುಳಿತ ಗೂಢಚಾರ, ಅವಳ ಅಪ್ಪಣೆ ಪಡೆದು ವಂದಿಸಿ ಹೊರಟು ಹೋದನು.

ಕೆಲವೊಂದು ಸಮಯ ಚೆನ್ನಮ್ಮನ ಮತಿ ಮೂಕವಾದರೂ ಆಕೆ ಬೇಗನೆ ಚೇತರಿಸಿಕೊಂಡಳು. ಯಾವ ಸಂಕಟ ಬಂದರೂ ಬರಲೆಂದು ಅದನ್ನು ಎದುರಿಸಲು ಕ್ರಿಯಾಶೀಲಳಾಗುವದೇ ಆಕೆಯ ಹುಟ್ಟುಗುಣ! ಇದುವರೆಗೆ ತಾನು ಆಸಕ್ತಿ ವಹಿಸುತ್ತಿರುವ ರಾಜ್ಯದ ಕ್ಷೇಮಾಭಿವೃದ್ಧಿಯೊಂದಲ್ಲದೆ ಈಗ ರಾಜ್ಯದ, ಗಂಡನ ಮಾನ–ಮರ್ಯಾದೆಗಳ ರಕ್ಷಣೆಯೊಂದು ಆಕೆಯ ಚಿಂತೆಯ ವಿಷಯುವಾಯಿತು. ಆಕೆ ಪತಿಯ ಮನಸ್ಸಿಗೆ ಸ್ವಲ್ಪಾದರೂ ವಿರಸನಿರಸ

ನಗಳಾಗದಂತೆ ಬಹು ಎಚ್ಚರಿಕೆಯಿಂದ ಅನುನಯುವಾಗಿ ನಡೆದಳು. ಆಡಳಿತದ ಚಾವಡಿಯಿಂದ ಬರುವ ರಾಜ್ಯದ ಸಮಸ್ಯೆಗಳ ವರದಿಗಳನ್ನು ಬಹು ಚಾಣಾಕ್ಷ ತನದಿಂದ ಚರ್ಚಿಸಿ ನಿರ್ಣಾಯಕ ಸಲಹೆ ನೀಡುತ್ತ ಅವನಿಗೆ ಬೇಸರವಾಗದಂತೆ ಯತ್ನಿಸಿದಳು. ಏನಾದರೂ ಮಾಡಿ ಆತನ ಮನಸ್ಸು ದುಷ್ಟಕೂಟದತ್ತ ಹರಿಯದಂತೆ ಯತ್ನಿಸಿದಳು. ಪತಿಯೊಡನೆ ಕೆಳದಿಗೆ ಹೋಗಿ, ರಾಜಗುರುಗಳ ಸೇವೆ ಮಾಡಿ, ಹಿತವಚನಗಳನ್ನು ಹೇಳಿಸಿಕೊಂಡು ಬಂದಳು. ರಾಜ್ಯ ದಲ್ಲಿನ ದೇವಸ್ಥಾನಗಳ ದರ್ಶನಗಳನ್ನು ಏರ್ಪಡಿಸಿ ಆತನಲ್ಲಿ ಸದ್ಭಾವ–ಸದಿಚ್ಛೆ ಗಳು ಹೆಚ್ಚುವಂತೆ ಮಾಡಿದಳು. ಆದರೆ "ಕೆಳದಿಯ ರಾಜ ಹೆಂಡತಿಯ ಬಂಧನದಲ್ಲಿದ್ದಾನೆಂದು" ನೆರೆಯ ರಾಜರಿಂದ ಅನ್ನಿಸಿಕೊಳ್ಳುವಂತೆ ಆಗಬಾರ ದೆಂಬ ಎಚ್ಚರಿಕೆಯೂ ಆಕೆಯ ಮನದಲ್ಲಿತ್ತು. ನಿಯಂತ್ರಣಕ್ಕೊಂದು ಮಿತಿ ಇರಬೇಕಾಗುತ್ತಿತ್ತು. ಸೋಮಶೇಖರನಾಯಕನು ಹೇಗೋ ರಾಜ್ಯ ಕಾರಭಾರ ನಡೆಸಹತ್ತಿದನಾದರೂ ಅವಕಾಶ ಸಿಕ್ಕಾಗ ದುಶ್ಚಟದ ನೆನಪಿಗಾಗಿ ಆದರ ಅಳವಿಗೊಳಗಾಗುತ್ತಿದ್ದನು. ದುರ್ಘಟ ಪ್ರವಾದಗಳು ಮಾತ್ರ ತುರ್ತಕ್ಕೆ ಒದಗಿರಲಿಲ್ಲ. ರಾಣಿಯ ಪ್ರಯತ್ನ ಬಹುಮಟ್ಟಿಗೆ ಫಲಿಸಿತ್ತು. ಆದರೆ ರಾಜನ ಗೌರವಕ್ಕೆ ಕುಂದೊದಗಿತ್ತು ಮಾತ್ರ !

ಇತ್ತ ಕುಹಕಿಗಳ ಬಲ ಬೆಳೆಯುತ್ತಲಿತ್ತು. ಮೇಲೆ ಮೇಲೆ ಇವರೇನು ಮಾಡಿಯಾರು ಅಸಂತುಷ್ಟರಷ್ಟೆ ! ಎನ್ನುವಂತಿದ್ದರೂ ಒಳಗೊಳಗೆ ಪ್ರಬಲ ರಾಗತೊಡಗಿದ್ದರು. ಸಿಂಹಾಸನಕ್ಕೆ ತಮ್ಮ ಹಕ್ಕು ತೋರಿಸುತ್ತಿದ್ದ ಅಂಧಕ ವೆಂಕಟಯ್ಯ, ಭದ್ರಯ್ಯಗಳೂ ಕಂದಾಚಾರದ ಲಕ್ಷ್ಮಯ್ಯ, ವೀರಭದ್ರಯ್ಯ ಮುಂತಾದ ಹಿಂದಿನ ಪದಚ್ಯುತ ದುಷ್ಟ ಅಧಿಕಾರಿಗಳೂ ಸೇರಿ, ಧನ ಮತ್ತು ಭವಿಷತ್ತಿನಲ್ಲಿಯ ಆಮಿಷಗಳ ಆಶೆಯಿಂಡ ಬರುವ ಅನುಯಾಯಿಗಳನ್ನು ಹೆಚ್ಚಿಸಿಕೊಂಡು, ಈಗಿನ ರಾಜಮನೆತನದ ನಾಶಕ್ಕೆ ಅಣಿಯಾಗುತ್ತಿದ್ದರು. ಧನದಾಶೆ ಏನನ್ನು ಮಾಡಿಸಲಿಕ್ಕಿಲ್ಲ ? ಭರಮೆಮಾವುತನು ಕೂಡ ಅದರ ಬಲೆಗೆ ಬಿದ್ದು ತನ್ನ ಒಡೆಯನ ನಿರ್ಮಲ ಸ್ನೇಹಕ್ಕೆ ದ್ರೋಹ ಬಗೆದನು. ಆ ರಾಜನ ಜೀವನದಲ್ಲಿ ಹೊಲೆಗಲಿಸಿ ಅವನ ನೈತಿಕ ಬಲವನ್ನು ಹಾಳು ಮಾಡಿದನು. ಅರಸನ ಅವಸ್ಥೆಯ ಈ ಸಮಯ ಸಾಧಿಸಿ, ವಿದ್ರೋಹಿಗಳು

ತಮ್ಮ ಕಾರ್ಯಚಟುವಟಿಕೆಗಳನ್ನು ತೀವ್ರಗೊಳಿಸಿದರು. ವಿಜಾಪುರ-ಬಾದ ಶಹನು ದಕ್ಷಿಣ ಭಾಗದಲ್ಲಿ ಸ್ಥಿರವಾಗಿಟ್ಟ ಸೇನಾನೆಲೆಗಳ ಅಧಿಪತಿ ಮುಜಬುರ ಖಾನನ ಸಹಾಯ ಪಡೆಯುವದಕ್ಕೂ ಈ ದುಷ್ಟಕೂಟದವರು ಹಿಂದೆಗೆಯ ಲಿಲ್ಲ! "ರಾಜನನ್ನು ಪದಚ್ಯುತಗೊಳಿಸಲು ತಮಗೆ ಸಹಾಯ ಮಾಡಿ ಅದಕ್ಕಾಗಿ ತಮ್ಮ ರಾಜ್ಯದ ಐದು ಕೋಟೆಗಳನ್ನು ಆಕ್ರಮಿಸಬಹುದು" ಎಂದು ಖಾನನೊಡನೆ ಒಡಂಬಡಿಕೆ ಮಾಡಿಕೊಂಡರು. ರಾಜ್ಯದಲ್ಲಿ ಈಗ ಅವ್ಯವಸ್ಥೆಯಿರುವದರಿಂದ ನೀವು ದಂಡೆತ್ತಿ ಬರಲು ತಕ್ಕ ಸಮಯವೆಂದು ಸೂಚಿಸಿದರು. ಮತ್ತೆ ಕೆಳದಿ ರಾಜ್ಯದಲ್ಲಿ ಕಾಲು ಚಾಚಲು ಖಾನನಿಗೆ ಹಾಸಿಗೆ ಹಾಕಿಕೊಟ್ಟಂತಾಯಿತು. ಅರಸೊತ್ತಿಗೆಯ ಅಂತಃಕಲಹವು ಯಾದವೀ ಯುದ್ಧದ ರೂಪ ತಾಳಿತು. ವೈರಿಗಳ ಬರವಿಗೂ ಬಾಗಿಲ ತೆರೆಯಿತು.

ಮುಜಬರಖಾನನು ಮುತ್ಸದ್ದಿ! ತಮ್ಮ ಸೈನ್ಯವನ್ನು ಜಿನ್ನೋಪಂತ ನೆಂಬ ಹಿಂದು ದಳವಾಯಿಯ ಅಧಿಪತ್ಯದಲ್ಲಿ ಕೊಟ್ಟು ಕಳುಹಿದನು. ತನ್ನ ಆಶ್ರಿತ ಪಕ್ಷಕ್ಕೆ ಹೆಚ್ಚು ಜನ ಬೆಂಬಲ ದೊರೆಯಲೆಂಬುದು ಅವನ ಉದ್ದೇಶ ವಾಗಿದ್ದಿತು! ಜಿನ್ನೋಪಂತನು ರಾಜ್ಯದೊಳಗೆ ಮುನ್ನುಗ್ಗಿ ಬಂದು 'ಮಹಾನವಮಿ ಬಯಲು' ಎಂಬ ಮೈದಾನದಲ್ಲಿ ಬೀಡು ಬಿಟ್ಟನು. ಇದನ್ನು ತಿಳಿದು ಸೋಮಶೇಖರನಾಯಕನು ರಾಜ್ಯದ ದುರ್ಗಾಧಿಪತಿಗಳಿಗೆ ತಮ್ಮ ತಮ್ಮ ಪಡೆಯೊಡನೆ ಬರಲು ಆಜ್ಞೆ ಕಳಿಸಿ ತತ್ಕಾಲತ್ಕೆ ಸಿದ್ಧವಿದ್ದ ದಂಡಿ ನೊಡನೆ ಹೊರಟು ಜಿನ್ನೋಪಂತನ ದಳದ ಮೇಲೆ ಎರಗಿದನು. ಕಾಳಗ ಕಡುತರವಾಗಿ ನಡೆಯಿತು. ಹಿಂಬದಿಯಲ್ಲಿದ್ದ ರಾಜನನ್ನು ಜಿನ್ನೋಪಂತನು ದೂರದಿಂದ ನೋಡಿ, ತನ್ನ ಬಲವಾದ ತೇಜಿಯನ್ನು ಓಡಿಸಿಕೊಂಡು, ಮಗ್ಗಲಿನ ಅರಣ್ಯದಲ್ಲಿ ಹಾದು ಬಂದು ಹಿಂಭಾಗದಲ್ಲಿ ನುಗ್ಗಿ ಮೋಸದಿಂದ ಸೋಮಶೇಖರನನ್ನು ಇರಿದು ಪಾರಾಗಿ ಹೋದನು. ಇದು ತಿಳಿದಾಗ ಕೆಳದಿಯ ದಂಡು ಚದರಿ ಹೋಗಹತ್ತಿತು.

ಈ ಕತೆಯನ್ನು ಕೇಳಿದ ಚೆನ್ನಮ್ಮ ಕಿಡಿಕಿಡಿಯಾದಳು. ಪತಿಯ ಮರಣದ ದುಃಖ ಕೆನೆಗಟ್ಟಿ ಕೋಪವಾಯಿತು. ಕೋಪೋದ್ರೇಕದಿಂದ ಬೆಂಕಿ ಯಾದಳು; ಚಂಡಿಯಾದಳು. ತತ್‌ಕ್ಷಣವೇ ದಿವ್ಯಾಶ್ವವನ್ನೇರಿ ರಣರಂಗಕ್ಕೆ

ಧಾವಿಸಿದಳು. ತಮ್ಮೊಡತಿಯ ಆವೇಶ–ಅಭಿಮಾನಗಳನ್ನು ಕಂಡು ಚದರಿ ಬರುತ್ತಿದ್ದವರು ಮರಳಿ ಒಂದಾದರು. ಬೇರೆಡೆಯಿಂದ ಬರುತ್ತಿದ್ದ ದಳ ದವರು ಇದನ್ನು ಕೇಳಿ, ಒತ್ತರದಿಂದ ಬಂದು ಕೂಡಿದರು. ರಾಣಿಯ ರಣೋತ್ಸಾಹದಿಂದ ಮೈದುಂಬಿದ ಕೆಳದಿಯ ಯೋಧರು, ಯಮನ ಭಟರಾಗಿ ಕೊಟ್ಟ ಹೊಡೆತಗಳಿಂದ ಜಿನ್ನೋಪಂತನ ತುರುಷ್ಕದಳ ಪುಡಿಪುಡಿಯಾಗಿ ಉರುಳಿತು. ಜಿನ್ನೋಪಂತನು ಕಾಲ್ದೆಗೆದನು. ಅವನ ಉಳಿದ ದಂಡು ಓಡಿಹೋಯಿತು. ಚೆನ್ನಮ್ಮ ಪತಿಯ ಶವದೊಡನೆ ನಗರಕ್ಕೆ ಬಂದಳು.

ಪತಿಯ ದೇಹಕ್ಕೆ ರಾಜೋಚಿತ ಸಂಸ್ಕಾರ ನಡೆಯುತ್ತಿರುವಾಗ ಚೆನ್ನಮ್ಮ ತನ್ನ ಮುತ್ತೈದಿಯ ಮಂಗಲಕರ ಚಿಹ್ನೆಗಳನ್ನು ದುಃಖದಿಂದ ಕಳಚಿ ಇತ್ತು ವೈಧವ್ಯವನ್ನು ಕಂಡುಕೊಂಡಳು. ಮೂರು ದಿನ ಅಂತರಂಗದ ಅಳಲಿ ಗೊಳಗಾಗಿ ಅನ್ನನೀರುಗಳಿಲ್ಲದೆ ಮೌನವಾಗಿ ಕಳೆದಳು. ನೆವಕ್ಕೆ ಲಿಂಗ ತೀರ್ಥ ಪ್ರಸಾದಗಳನ್ನಷ್ಟೇ ಒತ್ತಾಯದಿಂದ ಸೇವಿಸಿದಳು.

ತಾತ್ಕಾಲಿಕವಾಗಿ ರಾಜಾಜ್ಞೆ ನೀಡುವ ಅಧಿಕಾರ ರಾಣಿಗೆ ಮಾತ್ರ ಇರುವದೆಂಬುದು ಸಹಜವಾಗಿತ್ತು. ಮಂತ್ರಿಗಳು, ಓಲಗದ ಕಾರ್ಯದರ್ಶಿ ಗಳು ಬಂದು ಬಂದು ಮೌನದರ್ಶನ ಪಡೆದು ಮರಳುತ್ತಿದ್ದರು. ಅರಮನೆಯ ಆಡಳಿತಾಧಿಕಾರಿಯಾದ ಮಲ್ಲಪ್ಪಯ್ಯ ಆ ಕೋಣೆಯ ಬಾಗಿಲಲ್ಲಿಯೇ ಕುಳಿ ತಿದ್ದನು. ಬಾಗಿಲೆದುರಿಗೆ ಎಡಬಲದಲ್ಲಿ ಎರಡು ಸಾಲಾಗಿ ದರ್ಶನಕ್ಕೆ ಬಂದ ಪರಿವಾರ ಕುಳಿತಿರುತ್ತಿತ್ತು. ನಂಬಿಗೆಯ ಮಂತ್ರಿ ನರಸಪ್ಪಯ್ಯ ರಾಣಿಯ ಪರವಾಗಿ ಆಜ್ಞೆಗಳನ್ನು ನೀಡಿ ಚಾವಡಿಯ ಕೆಲಸ ಮುಂದುವರೆಸಿದ್ದನು. ನಗರದಲ್ಲಿ ಹೆಚ್ಚಿನ ಗೊಂದಲವೇನೂ ನಡೆಯದಂತೆ ದಳಪತಿ ಸಬ್ಬನೀಸ ಕೃಷ್ಣಪ್ಪಯ್ಯ ಭಟರ ನೇಮಿಸಿ ನೋಡಿಕೊಂಡು ಭದ್ರತೆಯನ್ನು ಕಾಯ್ದು ಕೊಂಡಿದ್ದನು. ಹೊರಗಿನಿಂದ ವರದಿಗಳನ್ನು ಪಡೆಯುತ್ತಿದ್ದನು.

ಸುಮ್ಮನೆ ಸಾಗುವದೆಷ್ಟು ದಿನ? ರಾಜ್ಯವಲ್ಲಿ ಕೆಲವು ತೊಂದರೆಗಳು ತಲೆದೋರಿದ್ದವು. ಮಂತ್ರಿಗಳು, ದಂಡನಾಯಕರು ಒದಗಿದ ಸಮಸ್ಯೆ ಗಳಿಗಾಗಿ ರಾಣಿಯೊಡನೆ ಚರ್ಚಿಸಿ ಆಜ್ಞೆ ಪಡೆಯಬೇಕಾಗಿತ್ತು. ನಾಲ್ಕನೆಯ ದಿನ ನರಸಪ್ಪಯ್ಯ, ಕೃಷ್ಣಪ್ಪಯ್ಯ ಇಬ್ಬರೂ ಅರಮನೆಗೆ ಬಂದು

ಚೆನ್ನಮ್ಮಾಜಿಯ ಕೋಣೆಯ ಮುಂದೆ ಕೈಮುಗಿದು ನಿಂತರು. ದುಃಖದ ಆವೇಗ ತಗ್ಗಿತ್ತು. ಮಲಗಿದ್ದ ಚೆನ್ನಮ್ಮಾಜಿ ನೋಡಿದಳು. “ಒಳಗೆ ಬನ್ನಿರಿ ಅಣ್ಣಾ” ಎನ್ನುತ್ತ ತಾನೆದ್ದು, ಮೇಲುದ ಹೊದ್ದು, ಸರಿಯಾಗಿ ಕುಳಿತು ಅವರಿಗೆ ಆಸನ ತೋರಿದಳು. ಅವರು ಪುನಃ ನಮಸ್ಕರಿಸಿ ಕುಳಿತರು. ಮೂವರ ಕಣ್ಣಲ್ಲಿಯೂ ನೀರು. ಕಂಬನಿ ತೊಡೆದುಕೊಂಡು ಪ್ರಧಾನಿ ನರಸಪ್ಪಯ್ಯ ಮಾತಿಗೆ ಮೊದಲು ಮಾಡಿದನು.

“ಅಮ್ಮಾಜಿ, ದೈವಾನುಕೂಲವಿಲ್ಲದ್ದರಿಂದ ಆಗಬಾರದ್ದು ಆಗಿ ಹೋಯಿತು, ಶಿವನಿಚ್ಛೆ! ಇನ್ನೆಷ್ಟು ಚಿಂತಿಸಿದರೂ ಅದು ಬಾರದು. ನೀವೇ ಹೀಗೆ ಅಳಲಿಗೊಳಗಾಗಿ ಕುಳಿತರೆ, ಮಕ್ಕಳಾದ ನಮ್ಮೆಲ್ಲರ ಗತಿಯೇನು? ರಾಜ್ಯದ ಗತಿಯೇನು? ಸಿಂಹಾಸನವನ್ನು ಹೀಗೆಯೇ ತೆರವಾಗಿಡಲಿಕ್ಕಾಗದು. ಇದನ್ನು ಅಪಹರಿಸಲಿಕ್ಕೆ ಯತ್ನಿಸುತ್ತಿರುವ ವಿಪಕ್ಷೀಯರ ಬಲ ಬೆಳೆಯುತ್ತಲಿದೆ. ಅವರ ಮುಂದಿನ ಕ್ರಮ ಇನ್ನೂ ಭೀಕರವಾಗಬಹುದು. ಅದಕ್ಕೆ ಆಸ್ಪದ ಕೊಡಬಾರದಾಗಿದೆ.”

“ಅಹುದು, ಅಮ್ಮಾಜಿ, ಅವರಿಗೆ ನೆರವಾಗ ಬಂದ, ಸಂಧಿಸಾಧಕ ಪರಕೀಯ ಶತ್ರುಸೈನ್ಯ ರಾಜ್ಯದಲ್ಲಿದೆ. ಜಿನ್ನೋಪಂತ ಚದುರಿದ ಈ ದಳವನ್ನು ಸಂಘಟಿಸಹತ್ತಿದ್ದಾನೆ. ರಾಜ್ಯದ ಬೇರೆ ಭಾಗಗಳಿಂದಲೂ ಭೀತಿಯ ವರದಿಗಳು ಬರುತ್ತಲಿವೆ. ಸಾಮಂತ ಪಾಳೆಯಗಾರರ ಮನಸ್ಸು ಕೆಡಿಸಿ, ಒಲಿಸಿಕೊಂಡು ಮೊಳೆಯುಪ್ಪ ದಂಡು ಕೂಡಿಸುತ್ತಿದ್ದಾನೆ. ಬಾದಶಹನ ಮತ್ತೊಬ್ಬ ಸರದಾರ ಸೀಮೆಯಲ್ಲಿ ಸಿದ್ಧನಾಗುತ್ತಿದ್ದಾನೆ. ಆಲೋಚಿಸಬೇಕು ತಾಯೀ!” ಎಂದು ನುಡಿದು ಕೃಷ್ಣಪ್ಪಯ್ಯ ಕೈಮುಗಿದು ತಲೆವಾಗಿದ.

“ಅಹುದು ಅಪ್ಪಗಳಿರಾ. ಕಳೆದ ಹಗಲಿರುಳು ನಾನೂ ಯೋಚಿಸುತ್ತಿದ್ದೇನೆ. ಇಂತಹ ವೈಧವ್ಯದ ವಿಪತ್ತಿನಲ್ಲಿಯೂ ದೇವರು ನನ್ನ ಮುಂದೊಂದು ಕರ್ತವ್ಯದ ಹೊರೆಯನ್ನು ಇರಿಸಿದ್ದಾನೆ. ಈ ಭಾರ ಹೊರಲಾರೆಯಾ, ಎಂದು ಕಾದು ನೋಡುತ್ತಿದ್ದಾನೆ” ಎನ್ನುತ್ತ ಕಂಬನಿ ತೊಡೆದುಕೊಂಡಳು.

'ಹೊರಬೇಕು ಅಮ್ಮಾಜಿ,' ಕೃಷ್ಣಪ್ಪಯ್ಯ ಆತುರದಿಂದ ನುಡಿದು ಮತ್ತೆ ಹೇಳಿದ: "ಮೊದಲು ವೈರಿಗಳನ್ನು ಸದೆಬಡಿದು ರಾಜ್ಯದಲ್ಲಿ ಶಾಂತಿಸ್ಥಾಪನೆ ಮಾಡಬೇಕು. ನುಗ್ಗಿಬಂದ ವೈರಿಯನ್ನು ರಾಜ್ಯದಿಂದ ಹೊರಗಟ್ಟದಿದ್ದರೆ, ಒಳಗಿನ ವೈರಿಗಳನ್ನು ನಾಶಮಾಡಲಿಕ್ಕಾಗದು, ಒಳ್ಳೆಯ ಕಾರ್ಯ ನಡೆಸಲಿಕ್ಕೂ ಆಗದು. ಆದ್ದರಿಂದ ಯುದ್ಧವನ್ನು ಮುಂದುವರಿಸಬೇಕಾಗಿದೆ ತಾಯೀ!"

ಪ್ರಧಾನಿ ಹೇಳಿದ: "ದಂಡನಾಯಕರ ಮಾತೇ ಸರಿಯೆಂದು ನನಗೂ ತೋರುತ್ತದೆ. ಸದ್ಯಕ್ಕೆ ಯುದ್ಧ ಮೊದಲು. ಸಿಂಹಾಸನದ ಮಾತು ಹಾಗಿರಲಿ! ತಾತ್ಕಾಲಿಕವಾಗಿ ರಾಜ್ಯ ರಕ್ಷಿಸುವ ಅಧಿಕಾರ ಶಾಸ್ತ್ರಸಮ್ಮತವಾಗಿಯೇ ನಿಮಗಿರುವದು".

"ಅಜರಾಮರ ಕೀರ್ತಿ ಪಡೆದ ರಾಜ್ಯದ ರಕ್ಷಣೆ ಈಗ ನಿಮ್ಮಿಂದ ಮಾತ್ರ ಸಾಧ್ಯ! ನೀವು ಧೃತಿಗೆಟ್ಟರೆ ಸರ್ವನಾಶ!'' ಕೃಷ್ಣಪ್ಪಯ್ಯನ ಕಳಕಳಿಯ ಮಾತು ಮುಗಿಯುವ ಮುನ್ನ ರಾಣಿ ಉದ್ವೇಗದಿಂದ: "ಆಗಕೂಡದು ಮಾವ, ಭಾವ, ಗಂಡ ಇವರು ತಮ್ಮ ರಕ್ತಧಾರೆಯೆರೆದು ಕಾಪಾಡಿದ ರಾಜ್ಯವನ್ನು, ಕಾಪಾಡದೆ ನನ್ನ ರಕ್ತವನ್ನು ಉಳಿಸಿಕೊಳ್ಳುವ ಹೇಡಿತನ ನನಗೆ ಬೇಡ! ಪತಿಯ ಕಾರ್ಯವನ್ನು ನಿರ್ವಹಿಸಿ, ಮುಂದುವರಿಸುವದೇ ಅವನಿಗೆ ಸಲ್ಲಿಸಬೇಕಾದ ಸೇವೆಯೆಂದು ನಂಬುತ್ತೇನೆ. ಹೇಳಿರಿ, ಯುದ್ಧವೆಂದರೆ ಅದನ್ನೇ ಮಾಡೋಣ. ಸಿದ್ಧರಾಗಿರಿ, ಸೇನಾಪತಿಗಳೇ ಸಿದ್ಧತೆಯಾಗಲಿ. ನಾಳೆ ಬೆಳಗಿನ ಜಾವದಲ್ಲಿ ನನ್ನ ರಣಧೀರ ಸಿದ್ಧವಾಗಿ ಬಾಗಿಲಲ್ಲಿರಲಿ. ನಾನು ರಣರಂಗಕ್ಕೆ ಹೊರಡುವೆ!

"ಬೇರೆ ಕೆಲವು ವಿಷಯಗಳಾಗಿ ಬೇಗಿನ ಹೊತ್ತಿಗೆ ಮತ್ತೆ ಭೆಟ್ಟಿಗೆ ಬರುವೆ. ಈಗ ತಾವು ಮೇಲೆದ್ದು ಸ್ನಾನ–ಪೂಜೆ, ಭೋಜನ ಮಾಡಬೇಕು ತಾಯಿ" ಪ್ರಧಾನಿ ಕೈಮುಗಿದೆಂದನು. ದಳಪತಿಯೂ ನಮಿಸಿ ಅಪ್ಪಣೆ ಪಡೆದನು.

ಚೆನ್ನಮ್ಮ ಕೋಣೆಯಿಂದ ಹೊರಬಂದಳು, ಅರಮನೆ ಮತ್ತೆ ಚೇತರಿಸಿ ಕೊಂಡಂತೆ ಕಂಡಿತು. ಸ್ವಾಮಿನಿಷ್ಠ ಸೇವಕರು ಯಥಾರೀತಿ ಕಾರ್ಯನಿರತ ರಾದರು.

× × × × × ×

ಅರಮನೆಯಿಂದ ಹೊರಬಂದ ಮಂತ್ರಿ ಸೇನಾಪತಿಗಳು ಓಲಗದ ಚಾವಡಿಗೇ ಬಂದರು. ಕೂಡಲೇ ನಗರದಲ್ಲಿರುವ ದಳವಾಯಿಗಳನ್ನು, ಹಿರಿಯ ಅಧಿಕಾರಿಗಳನ್ನು ಕರೆದು ಅವಸರದ ರಹಸ್ಯಸಭೆ ನಡೆಸಿದರು. ನರಸಪ್ಪಯ್ಯನು, ಸದ್ಯದ ಪರಿಸ್ಥಿಯನ್ನು ಪರಿಶೀಲಿಸುತ್ತ ಆಂತರಿಕ ವೈರಿಗಳು, ಹೊರವೈರಿಗಳನ್ನು ಬರಮಾಡಿಕೊಂಡು ನಡಿಸುತ್ತಿರುವ ಸರ್ವನಾಶದ ಕುಕೃತ್ಯ ಗಳನ್ನು ಖಂಡಿಸಿದನು. "ಇವರನ್ನು ಸದೆಬಡೆಯದಿದ್ದರೆ ರಾಜ್ಯವು ಅಳಿದು ಹೋಗುವದು. ವಿಧರ್ಮೀಯ ಆಳಿಕೆ ಬರುವದು. ನೂರೆಪ್ಪತ್ತು ವರ್ಷ ನಮ್ಮ ಕೆಳದಿಯ ನಾಯಕರು ರಕ್ಷಿಸಿ, ಉಳಿಸಿ, ಬೆಳಿಸಿಕೊಂಡು ಬಂದ ಧರ್ಮ ಸಂಸ್ಕೃತಿಗಳು ಹಾಳಾಗಿ ಹೋಗುವವು. ನಾವು ನಿರ್ಲಜ್ಜರಾಗಿ ಇದನ್ನು ಸಹಿಸಲಿಕ್ಕಾಗದು. ಮೊದಲು ಪರಕೀಯ ವೈರಿಯನ್ನು ಹೊಡೆದು ಹೊರಗಟ್ಟ ಬೇಕಾಗಿದೆ. ಅದಕ್ಕಾಗಿ ತತ್‌ಕ್ಷಣ ಯುದ್ಧಕ್ಕೆ ಸನ್ನದ್ಧರಾಗಬೇಕಾಗಿದೆ. ಅಮ್ಮಾಜಿಯವರನ್ನು ಕಂಡುಬಂದಿದ್ದೇವೆ. ಅವರು ಪುನಶ್ಚೇತನಗೊಂಡಿ ದ್ದಾರೆ. ಮುಂದಿನ ಮಾತು ಮುಂದಿರಲಿ. ತಾತ್ಕಾಲಿಕವಾಗಿ ರಾಜ್ಯಾಧಿಕಾರ ಅವರನ್ನು ಹೊಂದಿದೆ. ಅವರ ಧೀರತನ ಯುದ್ಧಕೌಶಲ ನಿಮ್ಮ ಅನುಭವಕ್ಕೆ ಬಂದದ್ದು. ಅವರ ಆಜ್ಞೆಯ ಕೆಳಗೆ ನಾವೆಲ್ಲ ರಾಜ್ಯರಕ್ಷಣೆಗೆ ಈಗಲೇ ಸನ್ನದ್ಧರಾಗಬೇಕಲ್ಲವೆ?" ಎಂದನು. ಇದಕ್ಕೆ ಸರ್ವರ ಒಪ್ಪಿಗೆ ಸಿದ್ಧವಾಗಿತ್ತು. ಎಲ್ಲರಿಂದ ಹೊರಬಂದುದು ಅದೇ ಪ್ರತಿಧ್ವನಿ. ಕೃಷ್ಣಪ್ಪಯ್ಯನು, ತನ್ನ ಸಹಸೇನಾನಾಯಕರಿಗೆ ಅವರವರ ಕೆಲಸ ಒಪ್ಪಿಸಿದ ಬಳಿಕ ಎಲ್ಲರೂ ಆತುರಾತು ವಾಗಿ ಯುದ್ಧಸೌಣೆಗೆ ನಡೆದರು.

ಸಾಯಂಕಾಲ ನರಸಪ್ಪಯ್ಯ ಪುನಃ ರಾಣಿಯನ್ನು ಕಂಡು ಸಮರಸಿದ್ಧತೆ ಯನ್ನು ವಿವರಿಸಿ, ಮತ್ತೆ ಮಾಡಬೇಕಾದುದನ್ನು ಕೇಳಿಕೊಂಡು ಹೋದನು.



# ೪. ಪರಾಕ್ರಮ, ಪಟ್ಟಾಧಿಕಾರ, ದತ್ತಪುತ್ರೋತ್ಸವ

ಕೊಡಸಿಯ ಬಳಿಯ ಬಯಲಲಿದ್ದ ಜಿನ್ನೋಪಂತನ ಪಾಳಯದ ಮೇಲೆ ಕೆಳದಿಯ ಸಂಘಟಿತ ಸೈನ್ಯ ಘಕ್ಕನೆ ಎರಗಿತು. ಕೆಳದಿಯ ಭಟನಾಯಕರು ತಮ್ಮ ತಮ್ಮ ಭಟರೊಡನೆ ಒಳನುಗ್ಗಿ ಸಂಹರಿಸಹತ್ತಿದಾಗ ವೈರಿದಳ ದಿಕ್ಕುಗಾಣದೆ ಚದರಹತ್ತಿತು. ಸ್ವತಃ ಚೆನ್ನಮ್ಮ ಒಳಸೇರಿ ತನ್ನ ಪತಿಯ ಹಂತಕನೆಲ್ಲಿ ಎಂದು ಇರಿಯುತ್ತ ಸಾಗಿದ್ದಳು. ತನ್ನ ದಳವನ್ನು ದಳಬದ್ಧಗೊಳಿಸಿ ಎದುರಿಸಲು ಜಿನ್ನೋಪಂತನಿಗೆ ಅವಕಾಶ ದೊರೆಯಲಿಲ್ಲ; ಅದು ಸಾಧ್ಯವಾಗಲಿಲ್ಲ. ಕೊನೆಗೆ ತಾನೂ ಗತಿಗಾಣದೆ ಕಾಲ್ದೆಗೆಯಲು ತನ್ನ ತೇಜಿಯನ್ನು ತಿರುಗಿಸಿ ಅಮುಕಿದ್ದನ್ನು ಕಂಡು ಹುದಾರಕಾಂತಯ್ಯ 'ಓಡುತ್ತಾನೆ ಹಿಡಿಯಿರಿ ತುರುಕರ ಊಳಿಗದ ದಳವಾಯಿ ! ಅವನೇ ಜಿನ್ನೊಪಂತ!' ಎಂದು ಹತ್ತಿರದ ಭಟರೊಡನೆ ಜಿನ್ನೋಪಂತನ ಬೆನ್ನುಹತ್ತಿದನು. ಆ ಕೂಗು ಕೇಳಿದ ಚೆನ್ನಮ್ಮಾಜಿ 'ಅವನೆ ಆ ಪಾಪಿ?' ಎಂದು ತನ್ನ ರಣಧೀರವನ್ನು ಹಾರಿಸಿ ಓಡಿಸುತ್ತ ತಾನೂ ಬೆನ್ನಟ್ಟಿಬಂದಳು. ಕಾಳಗದ ಕಣವನ್ನು ದಾಟಿ ಜಿನ್ನೋಪಂತ ಒಂದು ಚಿಕ್ಕದಾರಿಯನ್ನು ಕೂಡಿದಾಗ, ಬಲಗಡೆಯಿಂದ ಬಂದ ಕೆಳದಿಯ ಕೆಲವು ರಾಹುತರು ಅವನನ್ನು ಅಡ್ಡಗಟ್ಟಿದರು. ಜಿನ್ನೋಪಂತನ ಅಶ್ವ ಅನಿವಾರ್ಯ ಅರಣ್ಯದಲ್ಲಿ ಓಡಿತು. ಅವನ ರಕ್ಷಣೆಗೆ ಬಂದವರು ಅಲ್ಲಿಯೇ ಹತರಾದರು. ಕಾಂತಯ್ಯ, ಚೆನ್ನಮ್ಮ, ಕೆಲಭಟರು ಅರಣ್ಯದಲ್ಲಿ ಪಂತನನ್ನು ಬೆನ್ನಟ್ಟಿದರು. ಪಂತನ ಕುದುರೆ ಒಂದು ಪೊದೆಯಲ್ಲಿ ದಾರಿಗಾಣದೆ ನಿಂತುಬಿಟ್ಟಿತು. ಅವನು ಅತ್ತಿತ್ತ ನೂಕಿ ನೋಡಿದನು. ಒಂದು ಮಗ್ಗಲು ಕಿಡಿಗಣ್ಣಿನ ರಾಣಿ ಹತ್ತಿದ್ದ ರಣಧೀರ ಮುಂದಿರುವ ಮುಳ್ಳುಪುಂಜರದ ಮೇಲಿಂದಲೇ ಹಾರಿಬರಲು ತವಕಿಸುತ್ತಿತ್ತು. ಹಿಂದೆ ಬೆನ್ನಟ್ಟಿ ಬಂದ ಬೇರೆ ರಾಹುತರು. ಇನ್ನೊಂದೆಡೆಯ ಸಂಧಿಯಿಂದ ಹಾರಿಬಂದ ಕಾಂತಯ್ಯ ತನ್ನ ತುರಗವನ್ನು ಪಂತನ ಕುದುರೆಯ ಮೇಲೆ ಜಿಗಿಸಿ ಆತನ ರುಂಡವನ್ನು ಹಾರಿಸಿದನು. ಸೋಮಶೇಖರರಾಜನ ಅಂಗರಕ್ಷಕನಾದ ಕಾಂತಯ್ಯ ತನ್ನ

ಕಣ್ಣು ತಪ್ಪಿಸಿ ತನ್ನೊಡೆಯನ ಕೊಂದವನನ್ನು ಕೊಂದು ಸೇಡು ತೀರಿಸಿ ಕೊಂಡನು. ತನ್ನ ಬಾಳನ್ನು ಹಾಳುಮಾಡಿದ ವೈರಿಯ ವಧೆಯಿಂದ ಚೆನ್ನಮ್ಮನಿಗೆ ಪ್ರತಿಕಾರ ಭಾವನೆಯಿಂದ ಕಿಂಚಿತ್ ಸಮಾಧಾನವೆನಿಸಿತ್ತು. ಎಲ್ಲರೂ ಸಮರಭೂಮಿಗೆ ಮರಳಿದಾಗ ಜಿನ್ನೋಪಂತನ ದಂಡು ನಾಶವಾಗಿ ಉಳಿದವರು ಓಡಿಹೋಗಿದ್ದರು. ಕೊಡಸಿ ಕೋಟೆಯಲ್ಲಿ ಅವರು ಸಂಗ್ರಹಿಸಿ ಟ್ಟಿದ್ದ ಯುದ್ಧ ಸಾಮಾಗ್ರಿಗಳನ್ನು ಕೆಳದಿ ದಳಪತಿಗಳು ವಶಪಡಿಸಿಕೊಂಡರು.

ಜಿನ್ನೋಪಂತನ ಸಹಾಯಕ್ಕೆ ಬರುತಿದ್ದ ವಿಜಾಪುರದ ಇನ್ನೊಂದು ದಂಡನ್ನು ಚೆನ್ನಮ್ಮಾಜಿ ತಾನೇ ಒಂದು ಅಶ್ವದಳವನ್ನು ಸಾಗಿಸಿಕೊಂಡು ಹೋಗಿ ಸೋಲಿಸಿದಳು. ಅದರ ಚಾಲಕ ಶೇಕಬಾಬನ ಶಿರವನ್ನು ಬಲ್ಲಾಳು- ಕೆಂಗೆಯ ಹನುಮಪ್ಪನಿಂದ ಹರಿಸಿದಳು. ಬೇರೆ ರಾಜ್ಯದ ಅಂತಃಕಲಹದಲ್ಲಿ ಕೈಹಾಕಿ ಅದನ್ನು ಪ್ರೋತ್ಸಾಹಿಸಬಾರದೆಂದು ಆದಿಲಶಹನು ಬುದ್ಧಿಗಲಿತಿರ ಬೇಕು. ಈ ಎರಡು ದಾಳಿಗಳಲ್ಲಿ ಭಾರೀ ನಷ್ಟವನ್ನು ಮುಜಬರಖಾನನ್ನು ಆತನು ಹಿಂದಕ್ಕೆ ಕರೆಯಿಸಿಕೊಂಡನು. ಇರಲಿ.

ಚೆನ್ನಮ್ಮ ಕೃಷ್ಣಪ್ಪಯ್ಯನನ್ನು ಕಳುಹಿ ಧೂರ್ತನಾದ ಮೊಳೆಯಪ್ಪಯ್ಯ ನನ್ನು ಸೆರೆ ಹಿಡಿದು ತರಿಸಿದಳು. ಅವನ ದೊಂಬೆಯನ್ನು ಎಳೆಯುದರಲ್ಲಿ ಚಿವುಟಿ ಹಾಕಿದಂತಾಯಿತು. ವಂಚಕರಾದ ಪಾಳಯಗಾರರನ್ನು ದಂಡಿಸಿ ಅವರಲ್ಲಿ ತನ್ನ ಪ್ರತಾಪವನ್ನು ಬೀರಿದಳು. ಬಳಿಕ ನಗರಕ್ಕೆ ಬಂದು ತನ್ನ ಬಾಳಿಗೆ ವಿಘಾತಿಯನ್ನುಂಟುಮಾಡಿದ ಕೀಳುಜನರನ್ನು ಹಿಡಿದು ಸೆರೆಯಲ್ಲಿರಿಸಿ ದಳು ಆದರೆ ಮುಖ್ಯರಾದ ಭರಮೆ ಮಾವುತ, ಮಸೂದರು ತಪ್ಪಿಸಿಕೊಂಡು ರಾಜ್ಯವನ್ನೇ ಬಿಟ್ಟುಹೋದರು.

ಸದ್ಯದಲ್ಲಿ ಹೊರಗಿನ ವೈರಿಗಳು ಕುಗ್ಗಿದರು. ಆದರೆ ಶಿವಪ್ಪನಾಯಕ ವಂಶದ ವೈರಿಗಳಾಗಿರುವ ಕುಹಕಿಗಳು ತಮ್ಮ ತಂತ್ರವನ್ನು ಮುಂದುವರಿ ಸಿದ್ದರು. ಮರಬೋವಿ, ಕಂದಾಚಾರದ ಲಕ್ಷ್ಮಯ್ಯ, ವೀರಭದ್ರಯ್ಯ ಎಂಬ ಪುಂಡ ಪ್ರಮುಖರು ಇನ್ನೂ ಹಲವು ಪುಂಡರಾಜಕಾರಣಿಗಳನ್ನು ಕಲೆಹಾಕಿ ಕೊಂಡು ಕುರುಡವೆಂಕಟಯ್ಯನ ಪರವಾಗಿ ಚೆನ್ನಮ್ಮನ ಅಧಿಕಾರವನ್ನು ಧಿಕ್ಕರಿ ಸಿದರು. ವೆಂಕಟಯ್ಯನಿಂದ ಅವನ ಪರಿಚಾರಿಕೆಯಾದ ಹೊರಹೆಣ್ಣಿಗೆ ಒಂದು

ಗಂಡು ಮಗುವಾಗಿತ್ತು. ಆ ಮಗುವಿಗೆ ಶಿವಪ್ಪನಾಯಕನೆಂದು ಹೆಸರಿಟ್ಟು ಸಿಂಹಾಸನದ ಅಧಿಕಾರಿಯೆಂದು ಸಾರಿದರು. (ಇತಿಹಾಸಕಾರರು ಇವನನ್ನು ಕುತ್ಸಿತ ಶಿವಪ್ಪನಾಯಕನೆಂದು ಕರೆದಿದ್ದಾರೆ.) ಅವನ ಹೆಸರಿನಿಂದ ಆಜ್ಞೆಗಳನ್ನು ಹೊರಡಿಸಿದರು. ದಂಡಿನಲ್ಲಿಯೂ ಒಡಕು ಹುಟ್ಟಿಸಿದರು. ವೆಂಕಟಯ್ಯನನ್ನು ಮುಂದುಮಾಡಿಕೊಂಡು ಕಾರಭಾರ ನಡೆಸಿದರು. ಈ ಹುಚ್ಚಾಟವನ್ನು ಸಹಿಸಲಾಗದೆ, ಎದುರಿಸಲೂ ಆಗದೆ ಹಿರಿಯ ಮಂತ್ರಿ ಮುಂತಾದ ಅಧಿಕಾರಿಗಳು ಮನೆಸೇರಿದರು. ಗ್ರಾಮಾಂತರಕ್ಕೆ ತೆರಳಿದರು. ಆದರೆ ದಳಪತಿ ಸಬ್ಬನೀಸ ಕೃಷ್ಣಪ್ಪಯ್ಯ, ಕಾಸರಗೋಡು ತಿಮ್ಮಪ್ಪ ಇವರು ಇದನ್ನು ಒಪ್ಪದೆ, ಜಾತಪನ ಭದ್ರಪ್ಪನ ಮಗನನ್ನು ರಾಜ್ಯಕ್ಕೆ ನಿಲ್ಲಿಸಬೇಕೆಂದು ಯೋಚಿಸಿ, ಬೀಳಗಿ ಅರಸರ ಸಹಾಯದಿಂದ ದಂಡು ಕೂಡಿಸಿ ಈ ಕುಹಕಿಗಳನ್ನು ದಂಡಿಸಲು ಬಂದರು. ಈ ತಿಕ್ಕಾಟವನ್ನು ನೋಡಲಾರದೆ ಚೆನ್ನಮ್ಮ ಬಿದನೂರು ಬಿಟ್ಟು, ಭುವನಗಿರಿಯ ಕೋಟೆಯಲ್ಲಿ ಬಂದು ನಿಂತಳು. ತೆರವಾಗಿದ್ದ ಸಿಂಹಾಸನಕ್ಕೆ ಅಧಿಪತಿಯನ್ನು ಗೊತ್ತು ಮಾಡುವ ಅಧಿಕಾರ ತನಗೆ ಸೇರಿದ್ದೆಂಬುದು ಪ್ರಜಾಪ್ರಮುಖರಲ್ಲಿ ಮೂಡಿಬರಲೆಂದು ಕಾದು ನೋಡುತ್ತಿದ್ದಳು. ಆದರೆ ತಿಕ್ಕಾಟಕ್ಕಿಳಿದ ಎರಡು ಪಂಗಡಗಳವರೂ ಬೇರೆ ದಾರಿಯನ್ನೇ ಹಿಡಿದುದನ್ನು ಲಕ್ಷಿಸಿ ಎಚ್ಚರಿಕೆಯಿಂದಲೂ ಇದ್ದಳು.

ಮರಬೋವೆ, ಲಕ್ಷ್ಮಯ್ಯ, ವೀರಭದ್ರಯ್ಯಗಳು ತಮ್ಮ ಅಂಕಿತದ ದಳವನ್ನು ಸಜ್ಜುಗೊಳಿಸಿ, ಗಿರಿಮಲ್ಲನೆಂಬ ದಳವಾಯಿ ಕೂಡ, ಕೃಷ್ಣಪ್ಪಯ್ಯನ ಹೊಸಬಲಕ್ಕೆ ಎದುರಾಗಿ ಕಳಿಸಿದರು. ಒದಗಿದ ಕಾಳಗದಲ್ಲಿ ಗಿರಿಮಲ್ಲನ ದಂಡು ನಿತ್ತರಿಸಲಾರದೆ ಚದರಿಹೋಯಿತು. ಗಿರಿಮಲ್ಲ ಮಡಿದುಹೋದನು. ಕುಹಕಿಗಳಿಗೆ ಸೋಲಾಯಿತು. ರಾಜ್ಯದಲ್ಲಿಯ ಈ ಅರಾಜಕತೆಯ ತಾಂಡವತನವನ್ನು ನೋಡುವದು ಇನ್ನು ಚೆನ್ನಮ್ಮಾಜಿಗೆ ಆಗಲಿಲ್ಲ.

ಕೃಷ್ಣಪ್ಪಯ್ಯ, ತಿಮ್ಮಯ್ಯ ಇವರನ್ನು ಚೆನ್ನಮ್ಮ ವಿಶ್ವಾಸಪೂರ್ವಕವಾಗಿ ಭುವನಗಿರಿಗೆ ಬರಮಾಡಿಕೊಂಡಳು. ಅವರನ್ನು ಗೌರವದಿಂದ ಕಂಡು; "ನಿಮ್ಮಯೋಚನೆಯೇನು ? ನಿರ್ಣಯವೇನು? ಯೋಜನೆಯೇನು?" ಎಂದು ಕೇಳಿದಳು.

"ಅಮ್ಮಾಜಿ ನಮ್ಮ ಯೋಜನೆ ಗತಿಗಂಡಿಲ್ಲ. ಬೇಗನೆ ಬೇರೆಯೋಜನೆ ಮಾಡಿ ನಿರ್ಣಯಿಸುವೆವು" ಎಂದು ಅಪ್ಪಣೆ ಪಡೆದು ಬಂದರು. ಮೂರು ದಿವಸಗಳಲ್ಲಿ ಹಿಂದಿನ ಹಿರಿಯ ಮಂತ್ರಿಮಾನ್ಯರನ್ನೆಲ್ಲ ಕೂಡಿಸಿದರು. ಅವರೆಲ್ಲ ರೊಂದಾಗಿ ರಾಜನಿಷ್ಠೆಯ ಪ್ರತಿಜ್ಞೆ ಮಾಡಿ ನಿರ್ಣಯಿಸಿದ ನಿರ್ಣಯ ಹೀಗೆ :

"ರಾಜ್ಯದ ಒಡೆಯಿತಿ ರಾಣಿ ಚೆನ್ನಮ್ಮಾಜಿ ಅವರಿಗೆ ಪಟ್ಟಾಧಿಕಾರ, ಅವರೇ ಸಿಂಹಾಸನಾರೋಹಣ ಮಾಡಬೇಕು. ಅವರ ಉತ್ತರಾಧಿಕಾರ ಅವರಿಷ್ಟದಂತೆ !"

ಇದನ್ನು ಕೇಳಿ ರಾಜ್ಯದಲ್ಲೆಲ್ಲ ಸಂತೋಷ ಸಮಾರಂಭಗಳು ಜರುಗಿದವು. ತಿಮ್ಮಯ್ಯನು ತನ್ನ ಸೇನಾವಿಭಾಗದೊಡನೆ ಬಿದನೂರಿಗೆ ಹೋಗಿ ಕುಹಕಿಗಳ ಬಲವನ್ನೂ ಅದರೊಡನೆ ಅವರ ಮನೋರಥವನ್ನೂ ಭಗ್ನಗೊಳಿಸಿ ಕೋಟೆಯನ್ನು ವಶಪಡಿಸಿಕೊಂಡನು. ವೆಂಕಟಯ್ಯನನ್ನೂ ಅವನ ಅನುಯಾಯಿಗಳಾದ ಕುತ್ಸಿತರನ್ನು ಸೆರೆಹಿಡಿದು ಬಂಧನದಲ್ಲಿಟ್ಟನು. ಕಾರ್ಯಾಚರಣೆಯಲ್ಲಿ ಹಲವರು ಹತರಾಗಿದ್ದರು. ಅವರ ಬಾಲನಾಯಕನ ಕುತ್ಸಿತ ಶಿವಪ್ಪನನ್ನು ಅಂಗವಿಕಲನನ್ನಾಗಿಸಿ ರಾಜ್ಯಾಧಿಕಾರಕ್ಕೆ ಅಯೋಗ್ಯಗೊಳಿಸಿದನು. ಅಂತಃಕಲಹಕ್ಕೆ ಅಂತ್ಯವಾಯಿತು.

ಶಕವರ್ಷ ೧೫೯೪ ವಿರೋಧಿಕೃತ ಸಂವತ್ಸರ ಫಾಲ್ಗುಣ ಬಹುಳ ೧೦ ಶುಭಮುಹೂರ್ತದಲ್ಲಿ, ಭುವನಗಿರಿಯ ದುರ್ಗದರಮನೆಯಲ್ಲಿ ಚೆನ್ನಮ್ಮಾಜಿಗೆ ರಾಜ್ಯಪಟ್ಟಾಧಿಕಾರ ಸಮಾರಂಭ ನಡೆಯುವದೆಂದು ರಾಜ್ಯದಲ್ಲಿ ಸಾರಲಾಯಿತು. ಸಾಮಂತ ಮನ್ನೆಯರಿಗೂ ಮಿತ್ರರಾಜರಿಗೂ ಆಮಂತ್ರಣಗಳನ್ನು ಕಳಿಸಲಾಯಿತು.

ಅಂದು ಬೆಳಗಿನ ಜಾವದಲ್ಲಿ ಭುವನಗಿರಿಯ ದುರ್ಗದ ಮಹಾದ್ವಾರದ ಮೇಲೆ ಮಂಗಲವಾದ್ಯಗಳು ಮೊಳಗಹತ್ತಿದವು. ಚೆನ್ನಮ್ಮಾಜಿಗೆ ಎಚ್ಚರವಾಯಿತು. ಮೂರುವರೆ ತಿಂಗಳ ಹಿಂದೆ ದಿವಂಗತನಾದ ಪತಿಯ ಸ್ಮರಣೆಯಾಯಿತು. ಆತನ ಪೀಠವನ್ನೇರಿ, ಆತನು ಬಿಟ್ಟುಹೋದ ಪ್ರಜಾರಕ್ಷಣೆಯ ಕಾರ್ಯಭಾರವನ್ನು ತಾನು ವಹಿಸಿ ನಡಿಸಲು ಕಂಕಣಬದ್ಧಳಾಗುವದಕ್ಕಾಗಿ

ಸಿದ್ಧಳಾಗಬೇಕು. ಮನದಲ್ಲಿ ಮೂಡಿದ ಆ ಮೂರ್ತಿಗೂ, ಇಷ್ಟಲಿಂಗಕ್ಕೂ ವಂದಿಸಿ ಮೇಲೆ ಎದ್ದಳು. ಪ್ರಾತಃರ್ವಿಧಿಗಳನ್ನು ತೀರಿಸಿಬಂದಳು. ಆಕೆಯ ಶಯ್ಯಾಗೃಹದ ಬಾಗಿಲಿಗೆ ಬಂದು ವಂದಿಮಾಗಧರು ಮಂಗಲಪಾಠ ಹೇಳುತ್ತಿದರು. ಪರಿಚಾರಿಕೆಯರು ಒಡತಿಯನ್ನು ಸ್ನಾನಕ್ಕೆ ಕರೆದುಕೊಂಡು ಹೋದರು. ಸ್ನಾನಮಾಡಿ ಶುಚಿರ್ಭೂತಳಾಗಿ ಚೆನ್ನಮ್ಮ ಪೂಜಾಗೃಹವನ್ನು ಸೇರಿ. ಮನವಾರೆ ಲಿಂಗಾರ್ಚನೆಗೈದು ಅಂಗಸ್ತೋತ್ರಗಳನ್ನು ಹಾಡಿ ತಣಿದಳು. ಬಳಿಕ ಅರಮನೆಯ ಗುರುಗೃಹದಲ್ಲಿ ತಮ್ಮ ಅಂಗಾನುಷ್ಠಾನವನ್ನು ಪೂರೈಸಿ ಕೊಂಡಿದ್ದ ಗುರುಗಳ ಹತ್ತಿರ ಬಂದು, ಗುರುಸನ್ನಿಧಾನಕ್ಕೆ ಮಣಿದು ಗುರುಪಾದ ಪೂಜೆ ಮಾಡಿದಳು. ಪಾದೋದಕ, ಪ್ರಸಾದ ಸ್ವೀಕರಿಸಿ, ಮತ್ತೆ ಗುರುಪಾದದ ಮೇಲೆ ತಲೆಯಿಟ್ಟಾಗ, ಗುರುಗಳು ಚೆನ್ನಮ್ಮನ ಮಸ್ತಕದ ಮೇಲೆ ಹಸ್ತವ ನಿಟ್ಟು "ಧರ್ಮವನ್ನು, ಧರ್ಮರಾಜ್ಯವನ್ನು ರಕ್ಷಿಸಲು ಸಮರ್ಥಳಾಗಿ ಕೀರ್ತಿ ಪಡೆಯಮ್ಮಾ" ಎಂದು ಹರುಷ ತುಂಬಿದ ವಾಣಿಯಿಂದ ಆಶೀರ್ವದಿಸಿದರು.

ಬಳಿಕ ಬಾಗಿಲಲ್ಲಿ ಕಾದಿದ್ದ ವೈದಿಕರು ಸ್ವಸ್ತಿವಾಚನಮಾಡುತ್ತಿರುವಾಗ ಸಚಿವರು ಚೆನ್ನಮ್ಮಾಜಿಗೆ ಕೈಮುಗಿದು ಬಿನ್ನವಿಸಿ, ಅರಮನೆಯ ಒಳಅಂಗಣಕ್ಕೆ ಬಿಜಯಂಗೈಸಿಕೊಂಡರು. ಅಲ್ಲಿ ಧರ್ಮಾಧಿಕಾರಿಗಳ, ಪ್ರಜಾಪ್ರಮುಖರ, ಬಂಧುಬಳಗದವರ, ಸಮ್ಮುಖದಲ್ಲಿ ಚೆನ್ನಮ್ಮಾಜಿಗೆ, ವಿವಿಧ ದಿವ್ಯೌಷಧಿ ಗಳಿಂದ. ಸುಗಂಧದ್ರವ್ಯಗಳಿಂದ, ಮಿಶ್ರಿತವಾದ ಸಕಲ ತೀರ್ಥಗಳ ಪವಿತ್ರಜಲ ದಿಂದ ಶಾಸ್ತ್ರೋಕ್ತವಾಗಿ ರಾಜ್ಯ ಪಟ್ಟಾಭಿಷೇಕ ಸ್ನಾನವಾಯಿತ. ಗತಿಸಿದ ರಾಜರ ಸೋದರಿಯರು ಬಂದು ಚೆನ್ನಮ್ಮಾಜಿಯನ್ನು ರಾಜೋಚಿತ ವಸ್ತ್ರ ಭೂಷಣಗಳಿಂದ ಅಲಂಕರಿಸಿದರು. ಅಷ್ಟರಲ್ಲಿ ಪೂಜೆಗೊಂಡು ಬಂದ ರಾಜ ಕಿರೀಟವನ್ನು, ಎಲ್ಲ ಮತ–ಪಂಥಗಳ ಗುರುಗಳ, ರಾಜಮನ್ನೆಯರ, ಸಚಿವ ಸೇನಾನಿಗಳ, ಹಿರಿಯ ಅಧಿಕಾರಿಗಳ, ಪ್ರಜಾಮುಖ್ಯರ ಹಸ್ತಸ್ಪರ್ಶ ಮಾಡಿಸಿ ಚೆನ್ನಮ್ಮನ ತಲೆಯಮೇಲಿಟ್ಟರು. ವಜ್ರದ ಹಿಡಿಕೆಯ ಪರಂಪರಾಗತ ಖಡ್ಗ ವನ್ನು ಟೊಂಕಕ್ಕೆ ಕಟ್ಟಿದರು. ಆಗ ಭಸ್ಮ ತ್ರಿಪುಂಡ್ರದಿಂದ ಕಳೆಗೊಂಡ ಮುಖಮಂಡಲ ತೇಜೋರಾಶಿಯಂತೆ ಕಂಗೊಳಿಸಿತು.

ಬಳಿಕ ಜಯಘೋಷದ ಉತ್ಸವದೊಡನೆ ಓಲಗದ ವಿಶಾಲ ಮಂದಿರಕ್ಕೆ ಬಂದಾಗ ಸಭಿಕರು ಎದ್ದುನಿಂತು ಸ್ವಾಗತಿಸಿದರು. ಮಂತ್ರಿ ಮಾರ್ಗ ತೋರು

ತ್ತಿರಲು ಚೆನ್ನಮ್ಮಾಜಿ, ಪೂಜಾಲಂಕಾರ ಹೊಂದಿದ್ದ ಉನ್ನತ ಸಿಂಹಾಸನದ ಆರೋಹಣ ಮಾಡಿದಳು. ಕೋಟೆ ಕೊತ್ತಲಗಳ ಮೇಲೆ ಕುಶಾಲ ತೋಪು ಗಳು ಹಾರಿದವು. ವಿವಿಧ ವಾದ್ಯಗಳು ಮೊಳಗಿದವು. ಜಯಕಾರ ಧ್ವನಿ ಗಗನಕ್ಕೇರಿತು. ಭಟ್ಟಂಗಿಗಳು ಈ ರಾಜವಂಶಾವಳಿಯನ್ನು ಪಠಿಸುತ್ತಿರು ವಾಗ ವಿಜಾಪುರದ ಬಾದಶಹ, ಶಿವಾಜಿಯ ತಮ್ಮ ವೆಂಕೋಜಿರಾಜ ಆದಿಯಾಗಿ ಎಲ್ಲ ಮಿತ್ರರಾಜರಿಂದ ಬಂದ ಉಡುಗೊರೆಗಳನ್ನು ಸ್ವೀಕರಿಸಲಾಯಿತು. ಪೋರ್ತುಗೀಜರು, ಇಂಗ್ಲೀಷರು ಮೊದಲಾದ ವಿದೇಶೀಯ ವ್ಯಾಪಾರದ ಕಂಪನಿಗಳಿಂದಲೂ ಕಾಣಿಕೆಗಳು ಸಂದಾಯವಾದವು. (ಕ್ರಿ. ಶ. ೧೬೭೩ ಮಾರ್ಚ, ಫಾಲ್ಗುಣ ಶು. ೧೦, ಶಕೆ ೧೫೯೪.)

ನೆರೆ ರಾಜಧರ್ಮ ಮಾರ್ಗದ
ಪರಿಯಂ ಬಲ್ಲವನಿಪಾಲರೊಳ್ ಮಿಗಿಲೆನಿಪಾ
ತರುಣೀ-ನಿಕರ-ಶಿರೋಮಣಿ
ವರ ಚೆನ್ನಮ್ಮಾಜಿ ಕೆಳದಿಗಿಳೆಗರಸಾದಳ್

(ಕೆ. ನೃ. ವಿ. ಪುಟ ೧೩೦)

ಚೆನ್ನಮ್ಮರಾಣಿ ಗಂಭೀರವಾಗಿ ಧಾರಾಳವಾಗಿ ಮಾತನಾಡಿದಳು. ಸರ್ವ ಧರ್ಮಗಳ ಗುರುಗಳ ಆಶೀರ್ವಾದವನ್ನು ಬಯಸಿ, ಸಕಲರ ಸಹಕಾರದಿಂದ ಸದ್ಧರ್ಮದಿಂದ ರಾಜ್ಯಪರಿಪಾಲನೆ ಮಾಡುವ ಭಾಷೆ ತೊಟ್ಟಳು.

ಮುಂದೆ ರಾಜ್ಯದ ದೇವಸ್ಥಾನಗಳಿಗೆ ಕಾಣಿಕೆಗಳು, ದಾನಧರ್ಮಗಳು ಪ್ರಕಟಿಸಲ್ಪಟ್ಟವು. ಅನ್ನಸಂತರ್ಪಣೆ, ಅತಿಥಿಸತ್ಕಾರಗಳು ಜರುಗಿದವು. ಬಡವರಿಗೆ ಧಾನ್ಯಗಳನ್ನು, ವಸ್ತ್ರಗಳನ್ನು ಹಂಚಲಾಯಿತು. ರಾಜ್ಯದ ನಗರ ಗಳಲ್ಲಿ ಉತ್ಸವಗಳಾದವು ಪ್ರಜೆಗಳು ಹೊಸ ಆಳಿಕೆಯ ಫಲಗಳ ನಿರೀಕ್ಷೆಯ ಹುಮ್ಮಸತಾಳಿದ್ದರು.

ಚೆನ್ನಮ್ಮರಾಣಿಯು ಒಂದು ವಾರದ ಅನಂತರ ಪರಿವಾರ ಮತ್ತು ಸೈನ್ಯ ಸಮೇತಳಾಗಿ ಭುವನಗಿರಿ ದುರ್ಗದಿಂದಿಳಿದು ಬಿದನೂರ ಅರಮನೆಗೆ ಬಂದಳು. ರಾಜಾಲಯವನ್ನು ಪ್ರವೇಶಿಸಿ ರಾಜಕಾರ್ಯ ಕೈಕೊಂಡಳು.

ಚೆನ್ನಮ್ಮಾಜಿಯ ಪಟ್ಟಾಧಿಕಾರ ಸಮಾರಂಭದಲ್ಲಿ ಒಬ್ಬ ಚೆಲುವ ಬಾಲಕನು ಅಲ್ಲಲ್ಲಿ ಕಂಡುಬಂದು ಬಹುಜನರ ಗಮನ ಸೆಳೆದಿದ್ದನು ಆಗ ಅರಮನೆಯ ಒಳಗಿನಿಂದ ಬಂದ ನಾಲ್ಕೈದು ವರ್ಷದ ಆ ಪುಟ್ಟ ಬಾಲಕ ಸಭಾಭವನದಲ್ಲಿ ತನಗೆ ತಕ್ಕ ಸ್ಥಳದಲ್ಲಿ ಓರಣವಾಗಿ ಕುಳಿತು, ಎಲ್ಲರಂತೆ ಶಿಸ್ತಿನಿಂದ ವರ್ತಿಸಿದ್ದನು. ಅವನ ಅಗಲವಾದ ಮುಖ, ಹೊಳೆವ ಕಣ್ಣು, ಮುಪ್ಪೊಗದ ಕಿವಿ, ವಿಶಾಲವಾದ ಉಬ್ಬಿದ ಹಣೆ, ಇವನು ವಿದ್ವಾಂಸನಾಗುವನೆಂದು ಹೇಳುವಂತಿದ್ದವು. ಅರಮನೆಯಲ್ಲಿ ಆತನು ಪರಿವಾರಕ್ಕೆ ಪರಿಚಿತನಾಗಿದ್ದವನು. ಹಿರಿಯರಂತೆ ತನ್ನ ಲಿಂಗಪೂಜೆ ಮಾಡುವನು; ನೋಡುವನು; ಹಾಡುವನು. ಚೆನ್ನಮ್ಮಾಜಿ 'ಬಸವಾ' ಎಂದು ಕರೆದೊಡನೆ ಓಡಿ ಬಂದು ಮುಂದೆ ನಿಂದು ಕೈಮುಗಿಯುವನು. ರಾಣಿ ಮುಂದೆಳೆದು ಮೈದಡವಿ ಮುದ್ದಾಡಿ ತಿನ್ನುಣ್ಣುವದಕ್ಕೆ ಹೇಳಿಕಳಿಸುವಳು. ಇಲ್ಲವೆ ತಾನೇ ಕರೆದೊಯ್ದು ಕೊಡುವಳು. ಈ ಮಗು ಯಾರು? ಯಾರು ನೋಡೋಣ!

ಖ್ಯಾತದೊರೆ ಶಿಸ್ತಿನ ಶಿವಪ್ಪನಾಯಕನ ಚಿಕ್ಕ ತಂಗಿಯ ಇಬ್ಬರು ಹೆಣ್ಣು ಮಕ್ಕಳೆಂದರೆ ಸಿದ್ಧಮ್ಮಾಜಿ, ಗೌರಮ್ಮ. ಇವರಲ್ಲಿ ಸಿದ್ಧಮ್ಮಾಜಿ ಶಿವಪ್ಪನಾಯಕನ ಹಿರಿಯ ಮಗ ಭದ್ರಪ್ಪನಾಯಕನ ಅವಳಿ ಪತ್ನಿಯರಲ್ಲಿ ಒಬ್ಬಳಾಗಿದ್ದಳು. ಗೌರಮ್ಮ ಮರಿಯಪ್ಪಸೆಟ್ಟಿ ಎಂಬವನ ಮಡದಿಯಾಗಿದ್ದಳು. ಅಕ್ಕನ ಸಂಬಂಧದಿಂದ ಗೌರಮ್ಮ ಅರಮನೆಗೆ ಬರುತ್ತಿದ್ದಳು. ಆಗ ಅಕ್ಕನ ನಗೆವೆಣ್ಣೆ ಚೆನ್ನಮ್ಮಾಜಿಯನ್ನು ಆದರದಿಂದ ಕಾಣುತ್ತಿದ್ದಳು. ಅಕ್ಕ, ಅಕ್ಕನ ಗಂಡ ಗತಿಸಿದ ಮೇಲೆಯೂ ಚೆನ್ನಮ್ಮನೊಡನೆಯ ಪ್ರೀತಿಯ ಸಂಬಂಧ ಬೆಳೆದು ಬಂದಿತ್ತು. ಗೌರಮ್ಮನ ಕುಮಾರ ಬಸವಪ್ಪನು. ಸಿದ್ಧಮ್ಮಾಜಿ, ಭದ್ರಪ್ಪನಾಯಕರಿಗೆ ಮಗನಂತಾಗಿರುವಂತೆ, ಭದ್ರಪ್ಪನಾಯಕನ ತಮ್ಮ ಸೋಮಶೇಖರನಾಯಕನಿಗೂ ಮಗನಂತಾದನು. ಅಂದರೆ ಚೆನ್ನಮ್ಮಾಜಿಗೂ ಮಗನ ಹಾಗೆಯೇ ಸರಿ! ಸೋಮಶೇಖರದೊರೆ ಸಮರದಲ್ಲಿ ಹತನಾದ ಬಳಿಕ ಚೆನ್ನಮ್ಮಾಜಿಯ ಸಾಂತ್ವನಕ್ಕಾಗಿ ಗೌರಮ್ಮ ಕೆಲವು ದಿವಸ ಆಕೆಯ ಬಳಿಯಲ್ಲಿ ಬಂದು ಇದ್ದಳು. ಮರಳಿ ಹೋಗುವಾಗ ಆಕೆಯ ಇಚ್ಛೆಯಂತೆ ತನ್ನ ಮಗ ಬಸವಬಾಲಕನನ್ನು ಬಿಟ್ಟು ಹೋಗಿದ್ದಳು. ಭುವನಗಿರಿಯಲ್ಲಿ ಪಟ್ಟಾಧಿಕಾರ

ಸಮಾರಂಭದಲ್ಲಿ ನಲಿದಾಡಿದ ಬಸವಪ್ಪನು ರಾಣಿಯೊಡನೆ ಬಿದನೂರು ಅರಮನೆಗೂ ಬಂದನು, ಸುಂದರ ರೂಪ, ಸುಲಲಿತ ಮಾತು, ಅರಳುತ್ತಿರುವ ಪುಷ್ಪದ ನರುಗಂಪಿನಂತೆ, ಸದ್ಗುಣಗಳ ವಿಕಾಸವನ್ನು ಸೂಚಿಸುವ ನಡೆ–ಇವುಗಳಿಗೆ ಮುಗ್ಧಳಾದ ಚೆನ್ನಮ್ಮ ಬಹಳ ಅಕ್ಕರೆಯಿಂದ ಅವನ ಲಾಲನೆ–ಪಾಲನೆ ಮಾಡುತ್ತಿದ್ದಳು. ಈ ಅಕ್ಕರೆಯೇ, ಇವನು ಚೆನ್ನಮ್ಮನ ಪುತ್ರನಾಗುವದಕ್ಕೂ ರಾಜ್ಯದ ಒಡೆಯನಾಗುವದಕ್ಕೂ ನಾಂದಿಯಾಯಿತು.

ರಾಜ್ಯಾಧಿಕಾರವನ್ನು ವಹಿಸಿಕೊಂಡಕೂಡಲೆ ರಾಣಿ ಚೆನ್ನಮ್ಮಾಜಿಯೂ ಮಂತ್ರಿಮಾನ್ಯರೂ ಮೊದಲು ಯೋಚಿಸಬೇಕಾದ ಒಂದು ವಿಷಯ ರಾಜ್ಯದ ಉತ್ತರಾಧಿಕಾರಕ್ಕೆ ಸಂಬಂಧಿಸಿದ್ದಾಗಿತ್ತು. ಕೆಳದಿರಾಜ್ಯದ ಮೂಲಪುರುಷ ಚೌಡಪ್ಪನಾಯಕನ ಔರಸ ಪುರುಷ ಸಂತಾನದಲ್ಲಿ ರಾಜತ್ವಕ್ಕೆ ಅರ್ಹರಾದವರು ಯಾರೂ ಇರಲಿಲ್ಲ. ನೂರೆಪ್ಪತ್ತುಮೂರು ವರ್ಷಗಳ ಅನಂತರ ಆ ರಾಜವಂಶದ ಕುಡಿ ಮೊದಲ ಸಲ ಮುರುಟಿ ಚೆನ್ನಮ್ಮಾಜಿಯಲ್ಲಿ ನಿಂತಿದೆ. ಅದನ್ನು ಆಕೆ ಬೇಗ ಮುಂದೆ ಚಾಚಬೇಕು. ಇಲ್ಲದಿದ್ದರೆ ಯಾವದೇ ಕಾಲದಲ್ಲಿ ಒದಗಬಹುದಾದ ಆಕೆಯ ಅವಸಾನದ ಬಳಿಕ ನ್ಯಾಯಬದ್ಧ ರಾಜ್ಯಾಧಿಕಾರಕ್ಕೆ ಭಂಗ ಬರುವದು.

ಮಂತ್ರಿ ಮಹಾಜನರು ರಾಣಿಯ ಸನ್ನಿಧಿಯಲ್ಲಿ ಈ ವಿಷಯ ಪ್ರಸ್ತಾಪ ಮಾಡಿ ಆಲೋಚಿಸಿದರು. ಚೆನ್ನಮ್ಮರಾಣಿಯ ಒಲವುನಲವುಗಳಲ್ಲಿ ಇದ್ದವ ಬಸವಪ್ಪಬಾಲಕನೊಬ್ಬನೇ ! ಇವನು ಚೆನ್ನಮ್ಮರಾಣಿಯ ಪುತ್ರನಾಗಿ ಮುಂದೆ ರಾಜತ್ವಕ್ಕೆ ಎಲ್ಲ ರೀತಿಯಿಂದಲೂ ತಕ್ಕವನಾಗುವನೆಂದು ಮಹಾಜನರೂ ಒಮ್ಮತದಿಂದ ಒಪ್ಪಿಕೊಂಡರು. ಗೌರಮ್ಮ ಮರಿಯಪ್ಪಶೆಟ್ಟರನ್ನು ಬಿನ್ನವಿಸಿ ಬರಮಾಡಿಕೊಂಡು ಈ ನಿರ್ಣಯವನ್ನು ತಿಳಿಸಿದಾಗ ಅವರು ಸಂತೋಷದಿಂದ ಸಮ್ಮತಿಸಿದರು.

ಒಂದು ಒಳ್ಳೆಯ ದಿನವನ್ನು ಗೊತ್ತುಮಾಡಿ ದತ್ತಪುತ್ರೋತ್ಸವಕ್ಕೆ ಏರ್ಪಾಡು ಆಯಿತು. ಮರಿಯಪ್ಪಸೆಟ್ಟರ ನಿವಾಸದಿಂದ ಬಸವಪ್ಪಬಾಲಕನನ್ನು ಅತ್ಯುತ್ಸಾಹದ ಮೆರವಣಿಗೆಯಲ್ಲಿ ಅರಮನೆಗೆ ಬಿಜಯಂಗೊಳಿಸಿಕೊಳ್ಳ

ಲಾಯಿತು. ಸರ್ವಧರ್ಮಗುರುಗಳ ಹಿರಿಯರ ಸಮ್ಮುಖದಲ್ಲಿ ರಾಣಿ ಚೆನ್ನಮ್ಮ, ಬಸವಪ್ಪನನ್ನು ಮರಿಯಪ್ಪ-ಗೌರಮ್ಮರ ಹಸ್ತದಿಂದ ಶಾಸ್ತ್ರೋಕ್ತವಿಧಿಯಂತೆ ದತ್ತು ಸ್ವೀಕರಿಸಿ, 'ಬಸಪ್ಪನಾಯಕ'ನೆಂದು ನಾಮಕರಣ ಮಾಡಿದಳು. ವಿಪುಲ ದಾನಧರ್ಮಗಳನ್ನೆಸಗಿ ಪುತ್ರೋತ್ಸವ ಜರುಗಿಸಿದಳು. (ಶಾ. ಶ. ೧೫೯೫ ಶ್ರಾವಣ ಶು. ೧೪. ಕ್ರಿ. ಶ. ೧೬೭೩ ಅಗಷ್ಟ.)

ಕುಮಾರನಿಗೆ ಓದುವಿದ್ಯೆ, ಅಂಗಸಾಧನೆಗಳ ಗುರುಗಳನ್ನು ನಿಯಮಿಸಿ ಶಿಕ್ಷಣಕೊಡುವ ವ್ಯವಸ್ಥೆ ಮಾಡಿ, ಅವನ ಅಭಿವೃದ್ಧಿಯನ್ನು ನೋಡಿ ಸಂತಸ ಪಡುತ್ತ ಪೋಷಿಸಿದಳು. ಬಸವಪ್ಪನಾಯಕನು ದೊಡ್ಡವನಾದಂತೆ ಶಸ್ತ್ರಸಾಧನೆ, ಗಜ-ತುರಗ ವೈಹಾಳಿಗಳಲ್ಲಿಯೂ ಬಲ್ಲಿದನಾದನು. ಮುಂದೆ ಘನ ವಿದ್ವಾಂಸನೂ, ಕವಿಯೂ ಆದನು. ಹಲವು ಸಂಸ್ಕೃತ, ಕನ್ನಡ ಕೃತಿಗಳನ್ನು ರಚಿಸಿ ಕನ್ನಡನಾಡಿಗೆ ಕೀರ್ತಿ ತಂದನು.



# ೫. ದಕ್ಷ ರಾಜ್ಯಭಾರ

ಕೆಳದಿ ಮೈಸೂರು ರಾಜ್ಯಗಳ ನಡುವಿನ ವೈರ ಇನ್ನೂ ಮುಂದುವರಿದೇ ಇತ್ತು. ಅವುಗಳ ನಡುವಿನ ಸಂಬಂಧ ಎಂದೂ ಸುಧಾರಿಸಲಿಲ್ಲ. ಚಿಕ್ಕಪುಟ್ಟ ಪಾಳಯಗಾರರು, ನಾಯಕರು ರಾಜ್ಯದ ಗಡಿಗಳಲ್ಲಿ ದಾಳಿ ಮಾಡುತ್ತಿದ್ದರು. ಕಳೆದ ಕೆಲವು ವರ್ಷಗಳಲ್ಲಿ ರಾಜ್ಯದ ಒಳಜಗಳಗಳ ಕಾರಣದಿಂದ ಆಡಳಿತದಲ್ಲಿ ಅವ್ಯವಸ್ಥೆಯಾಗಿ ಪ್ರಜಾಹಿತದ ಕಾರ್ಯಗಳು ಕುಂಠಿತವಾಗಿದ್ದವು. ಆಡಳಿತದ ಮೇಲ್ವಿಚಾರಣೆ ಬಿಗಿಗೊಳಿಸಿ, ಅಭಿವೃದ್ಧಿಕಾರ್ಯಗಳನ್ನು ತ್ವರಿತಗೊಳಿಸುವದು ಚೆನ್ನಮ್ಮಾಜಿಗೆ ಅಗತ್ಯವಾದುದೆನಿಸಿತ್ತು. ಆದರೆ ವೈರಿಗಳ ಉಪಟಳ ಆತಂಕಕಾರಿಯಾಗಿತ್ತು. ಮೊದಲು ವೈರಿಗಳನ್ನು ಹಿಂದಕ್ಕಟ್ಟಿ ಗಡಿಗಳನ್ನು ಭದ್ರಗೊಳಿಸಿ, ಉಳಿದ ಕಾರ್ಯಗಳನ್ನು ಕೈಕೊಳ್ಳಬೇಕೆಂದು ಸಚಿವರು ಸರದಾರರು ಸಹಿತ ಒಟ್ಟಾಭಿಪ್ರಾಯವಾಯಿತು.

ಕಾಸರಗೋಡು ತಿಮ್ಮಣ್ಣನಾಯಕನನ್ನು ಸೇನಾಸಮೂಹದೊಡನೆ ಕಳುಹಿ ಫಲಸಂಪತ್ತಿನ ಹೊನ್ನಾಳಿ ಕೋಟೆಯನ್ನು ತಿರುಗಿ ವಶಪಡಿಸಿಕೊಂಡಳು. ಪಂಚಮಹಾಲದಲ್ಲಿಯ ಮಿಡಚಿಕೋಟೆಯನ್ನು ಸ್ವಾದಿ ಅರಸರು ಆಕ್ರಮಿಸಿ, ಹನುಮನಾಯಕನನ್ನು ಅದರ ಅಧಿಕಾರಿಯಾಗಿ ನೇಮಿಸಿದ್ದರು. ತಿಮ್ಮಣ್ಣನೊಡನೆ ಅಲ್ಲಿಗೂ ಸೈನ್ಯವನ್ನು ಕಳುಹಿ, ಹನುಮನಾಯಕನ ಶೌರ್ಯವನ್ನು ಮಣ್ಣುಗೂಡಿಸಿ, ಮಿಡಿಚೆಯನ್ನಲ್ಲದೆ ಬೇರೆ ಕೆಲವು ಪ್ರದೇಶಗಳನ್ನು ಹಿಡಿದುಕೊಂಡಳು. ಶಿರಸಿಯ ನಾಯಕನ ಎರಡು ಕೋಟೆಗಳನ್ನು ಹಿಡಿದು ಆವನ ತಲೆಬಾಗಿಸಿದಳು. ರಾಜ್ಯಾಧಿಕಾರಕ್ಕೆ ಕಚ್ಚಾಟ ನಡೆದಾಗ ಸಂದುಸಾಧಿಸಿ ತಾನು ರಾಜ್ಯಾಪಹಾರ ಮಾಡಬೇಕೆಂದು ತಂತ್ರ ನಡಿಸಿ ವಿಫಲನಾಗಿದ್ದ ಜಾತಪನ ಭದ್ರಪ್ಪನು ಈಗ ಘಟ್ಟದ ಕೆಳಗಿನ ತುಳುನಾಡಿನ ಪಾಳಯಗಾರರನ್ನು ಕೂಡಿಕೊಂಡು ಬಂಡೆದ್ದು ಕಾರಕಳ, ಮಲ್ಲಿಕಾರ್ಜುನಗಿರಿ ಕೋಟೆಗಳನ್ನು ವಶಪಡಿಸಿಕೊಂಡು ಮಲೆತುನಿಂತನು. ರಾಣಿಯು ದಳವಾಯಿ ಬಲಗೈ ಭದ್ರಪ್ಪನೊಡನೆ ಬಲವಾದ ದಂಡು ಕಳುಸಿ ಆ ಕೋಟೆಗಳನ್ನು ಮರಳಿ ವಶ

ಪಡಿಸಿಕೊಂಡಳು. ಜಾತಪನ ಭದ್ರಪ್ಪನನ್ನು ಅವನ ಮಗನನ್ನು ಹಿಡಿದು ತರಿಸಿ ದಂಡಿಸಿದಳು.

ಹೀಗೆ ಮಿಂಕ್ಕಭಾಗಗಳಲ್ಲಿ ರಾಣಿ ತನ್ನ ಪ್ರಭಾವ ಬೀರಿದ ಬಳಿಕ ತಿಮ್ಮಣ್ಣ ಮತ್ತು ಕೃಷ್ಣಪ್ಪಯ್ಯ ಇವರ ಕೈಕೆಳಗೆ ಎರಡು ಸುಸಜ್ಜಿತ ದಳಗಳನ್ನು ಕಳಿಸಿ ಮೈಸೂರವರ ದಾಳಿಗಳನ್ನು ಹಿಂದಕ್ಕಟ್ಟಿ, ಅವರ ರಾಜ್ಯದ ಕರೂರ, ಬಾಣಾವರ, ಹಾಸನ, ಬೇಲೂರು ಪ್ರದೇಶಗಳನ್ನು ಹಿಡಿದುಕೊಂಡು ಬಹು ಕಾಲ ಅವರು ತಲೆಯೆತ್ತದಂತೆ ಮಾಡಿದಳು. ಆ ಅವಕಾಶದಲ್ಲಿ ಇತ್ತ ಸೋದೆಯ ರಾಮಚಂದ್ರನಾಯಕರು ಮರಳಿ ದಾಳಿ ನಡಿಸಿದ್ದರಿಂದ ಚೆನ್ನಮ್ಮ-ರಸಿ ಖತಿಗೊಂಡು ಸಬಲ ಸೇನೆ ಕಳಿಸಿ ಆ ರಾಜ್ಯದ ಬನವಾಸಿ, ಬಂದನ-ಗೂಡು, ಬಾಳೂರು, ಹುಲಿಗಣ್ಣು, ಕರವೂರುಗಳನ್ನು ವಶಪಡಿಸಿಕೊಂಡು, ಸ್ವಾದಿಯಿಂದ ರಾಮಚಂದ್ರನಾಯಕನನ್ನು ಓಡಿಸಿ, ಅಲ್ಲಿ ತನ್ನ ದಂಡನ್ನಿಟ್ಟಳು. ಆ ಅರಸು ಹಲವರಿಂದ ಹೇಳಿಸಿ, ದೈನ್ಯದಿಂದ ಶರಣಾಗತನಾಗಲು, ಚೆನ್ನಮ್ಮಾಜಿ ದಯೆಯಿಂದ ಸ್ವಾದಿಯನ್ನು ಬಿಟ್ಟುಕೊಟ್ಟಳು. ಅವನನ್ನು ಸಂಸ್ಥಾನದಲ್ಲಿ ನಿಲ್ಲಿಸಿದಳು. ಗರ್ವಿಷ್ಠನಾಗಿ ಪ್ರಜೆಗಳನ್ನು ಪೀಡಿಸುತ್ತಿದ್ದ ಜೆರುಮತಿ ಅರಸನ ಬಿಂಕವನ್ನು ಬಿಡಿಸಿ, ಅವನ 'ಮೊಳಕಾಲಬಾಸಿಗ' ಬಿರುದನ್ನು ಕಿತ್ತೆಸೆದಳು. ವಿಜಯೋತ್ಸವದಿಂದ ಮೆರೆದಳು.

ಈ ಪಟ್ಟದರಸಿ ರೂಪಿಸುವ ಯುದ್ಧತಂತ್ರಗಳನ್ನು ನೋಡಿ ಅನುಭವಿಕ ಸೇನಾಪತಿಗಳು ಕೂಡ ಮೆಚ್ಚಿ ತಲೆದೂಗುತ್ತಿದ್ದರು. ಆಕೆ ರಣರಂಗದ ಪರಿಣಾಮಗಳನ್ನು ನಿರೀಕ್ಷಿಸಿ ಮುಂದಿನ ಕ್ರಮಗಳನು ನಿರ್ಧರಿಸುವದಕ್ಕಾಗಿ ಆಹಾರ-ನಿದ್ರೆಗಳ ಪರಿವಿಲ್ಲದೆ ಚಲಿಸುತ್ತಿದ್ದಳು. ತನಗೆ ವಿಶ್ರಾಂತಿಯಿಲ್ಲದೆ, ಮೈಗಾವಲಿನ ಪಡೆಯ ಭಟರನ್ನು ಬದಲಿಸಿ ಅವರಿಗೆ ವಿಶ್ರಾಂತಿಗೆ ಅನುವು ಮಾಡಿಕೊಡುತ್ತಿದ್ದಳು. ಜಾಣಳು, ಧೀರಳು ಆಗಿದ್ದ ತಮ್ಮ ಒಡತಿ ಕರುಣಾಳೂ ಆಗಿದ್ದಾಳೆಂದು, ಸೈನಿಕರು ಅವಳ ಇಚ್ಛೆಯಂತೆ ಮನವಿಟ್ಟು ಹೋರಾಡಿ ವಿಜಯಕ್ಕೆ ಕಾರಣರಾಗುತ್ತಿದ್ದರು. ಚೆನ್ನಮ್ಮ ರಾಣಿ ಪ್ರತಾಪ ಶಾಲಿನಿ ಎಂದು ಪ್ರಸಿದ್ಧಳಾದಳು. ಹಲವು ವರ್ಷಗಳ ಕಾಲ ವೈರಿಗಳು

ಕೆಳದಿಯು ರಾಜ್ಯದಲ್ಲಿ ಕಾಲಿಕ್ಕದಂತಾದರು. ವಿಜಾಪುರ ಬಾದಶಹನು ಕೆಳದಿಯನ್ನು ಸಮಾನತೆಯ, ಸ್ವಾತಂತದ ರಾಜ್ಯವೆಂದು ಒಪ್ಪಿದ್ದನು.

ಒಂದು ಕಡೆಯಿಂದ ಪಟ್ಟದರಸಿಗೆ ನಿಶ್ಚಿಂತೆಯಾಯಿತು. ಅಂತರಂಗ ಶಾಂತವಾಯಿತು. ರಾಜ್ಯದ ಕೋಶವನ್ನು ತುಂಬುವ ಪ್ರಜೆಗಳ ಹಿತದ ಕಾರ್ಯಗಳನ್ನು ಕೈಕೊಳ್ಳಲು ಅನುವಾಯಿತು. ಇನ್ನು ಅದೇ ಕೆಲಸ ! ಅದರದೇ ಚಿಂತೆ ! ದಿನವೊಂದಕ್ಕೆ ಒಬ್ಬ ಮಂತ್ರಿಯನ್ನು ಇಲ್ಲವೆ ಒಬ್ಬ ನಿಯೋಗಿಯನ್ನು ಬರಮಾಡಿಕೊಂಡು ಅವನ ಕಾರ್ಯವಿಧಾನಗಳನ್ನು ಪರಿಶೀಲಿಸಿದಳು. ಹೊಸ ಸಲಹೆ ನೀಡುವಳು, ಫಲಿತಾಂಶಗಳನ್ನು ಪರೀಕ್ಷಿಸುವಳು. ಆಲಸ್ಯವು ಆಕೆಯಲ್ಲಿ ಹುಟ್ಟಾ ಇರಲಿಲ್ಲ; ವೈಭವ ವಿಲಾಸಗಳ ಜೀವನಕ್ಕೆ ಎಳಸಿದ ಮನಸ್ಸಲ್ಲ. ಬಿಡುವಿಲ್ಲದ ದುಡಿಮೆ ! ಆದರೆ ಕಾತುರವಿಲ್ಲ; ಪ್ರಜೆಗಳ ಕಣ್ಣಲ್ಲಿ ಆನಂದದ ಬೆಳಕನ್ನು ಕಾಣಲು ಆತುರ ಮಾತ್ರ! ರಾಜ್ಯದ ಜನವೆಲ್ಲ ತನ್ನ ಮಕ್ಕಳು ಎಂದೇ ಭಾವಿಸಿದ್ದಳು. ಆಕೆಯ ದಕ್ಷ ನೇತೃತ್ವದಲ್ಲಿ ಆಡಳಿತ ಯಂತ್ರ ಚುರುಕಾಯಿತು. ಅದಕ್ಕೆ ಒಗ್ಗಿಕೊಳ್ಳದ ಕರ್ಮಚಾರಿಗಳು ಮನೆಗೆ ಹೋದರು. ಎಲ್ಲೆಲ್ಲಿಯೂ ಜಾಗ್ರತಿ, ನಿಷ್ಕಲ್ಮಷ ವಾತಾವರಣ ! ಅರಸಿಯ ಪ್ರಸನ್ನ ಮುಖ ಈಗ ಅರಮನೆಯನ್ನು ಬೆಳಗಹತ್ತಿತು.

ಒಂದು ದಿನ; ಮಹಾರಾಣಿ ಬೆಳಗಿನ ಪೂಜಾನುಷ್ಠಾನ ಮುಗಿಸಿಕೊಂಡು ಪೂಜಾಗೃಹದಿಂದ ಹೊರಗೆ ಬರುವ ಹೊತ್ತಿಗೆ ಎಂದಿನಂತೆ ರಾಜಕುಮಾರ ಬಸವಪ್ಪ ಬಾಗಿಲಲ್ಲಿ ಕಾಯ್ದಿದ್ದನು. ಆತನು ಭಸ್ಮಾಲಂಕೃತನಾಗಿ ಮಡಿ ಬಟ್ಟೆಯ ಮೇಲುದ ಹೊದ್ದು ನಿಂತಿದ್ದನು. ತನಗೆ ನಮಸ್ಕರಿಸಿದ ಕುಮಾರನ ತಲೆಯ ನೇವರಿಸುತ್ತ ಒಡಗೊಂಡು ತಾಯಿ, ಉಪಹಾರ ಗೃಹಕ್ಕೆ ಹೋದಳು. ಹರ್ಷ ತುಂಬಿದ ತಾಯಿಯ ವದನವನ್ನು ನೋಡುತ್ತ ಬಸವರಾಜ :

"ಅಮ್ಮಾಜಿ ಯುದ್ಧ ನಡೆಯುವ ಕಡೆಗೆ ಬರಲು ನನಗೆ ಬೇಡವೆಂದಿರಿ ; ಈಗ ರಾಜಕಾರ್ಯಕ್ಕಾಗಿ ನೀವು ಪ್ರವಾಸಮಾಡುವಾಗಲೂ ನಿಮ್ಮ ಸೇವೆಗೆ ನಾನು ಬರಬಾರದೇ ?" ಎನಲು ತಾಯಿ ನಗುತ್ತೆಂದಳು.

"ಎಷ್ಟು ಆತುರ ಮಗು ? ಎಲ್ಲವೂ ಕಾದಿದೆ ಮುಂದೆ ! ಸಮರ ಭೂಮಿಯ ಸಮೀಪಕ್ಕೆ ಬರುವ ವಯಸ್ಸಲ್ಲ ನಿಮ್ಮದು. ರಾಜಕಾರ್ಯದಲ್ಲಿ ಬರಬಹುದು. ಆದರೆ ನಿಮ್ಮ ವಿದ್ಯಾಭ್ಯಾಸಕ್ಕೇ ವೇಳೆಗಳೆಯುವುದು ಈಗ ಮಹತ್ವದ್ದು. ಅದರಲ್ಲಿಯೇ ಅಷ್ಟಷ್ಟು ಓಲಗದ ಚಾವಡಿಗೂ ಕರಕೊಂಡು ಹೋಗುವೆ."

"ರಾಜ್ಯದಲ್ಲಿ ಪ್ರವಾಸಕ್ಕೆ ?"

"ಬರಬರುತ್ತ ಬಂದೀರಂತೆ, ಒಂದೆರಡು ವರ್ಷ ಹೋಗಲಿ ಇನ್ನೂ."

ಇಬ್ಬರೂ ಹಜಾರಕ್ಕೆ ಬಂದಾಗ, ದರ್ಶನಕ್ಕಾಗಿ ಕಾದಿದ್ದ ಮಂತ್ರಿ ಷಡಕ್ಷರಯ್ಯ ಕೈಮುಗಿದನು.

"ಅಮ್ಮಾಜಿ, ಕುಮಾರರಿಗೆ ವೀರಶೈವ ತತ್ವಜ್ಞಾನದಲ್ಲಿ ಬಹಳ ಆಸಕ್ತಿ! ಅವರು ಕೇಳುವ ಚಿಕಿತ್ಸಕ ಪ್ರಶ್ನೆಗಳು ಒಮ್ಮೊಮ್ಮೆ ನನ್ನನ್ನು ಆಳವಾಗಿ ಅರಿಯಲು ಹಚ್ಚುತ್ತವೆ. ಅವರಿಗೆ ಹೇಳಿಕೊಡುತ್ತ ನಾನೂ ಟಿಪ್ಪಣಿ ಬರೆಯುತ್ತಿದ್ದೇನೆ."

"ಸರಿ, ಗುರು ಶಿಷ್ಯರ ಅಭ್ಯಾಸ ಜತೆಯಾಗಿ ಸಾಗಿದೆ, ಶ್ರೇಯಸ್ಕರ; ಅಭ್ಯಾಸದ ಮಟ್ಟ ಬೇರೆ ಬೇರೆ ಇರಬಹುದು."

"ಹೌದು ಅಮ್ಮಾಜಿ, ನಮ್ಮ ಯುವರಾಜರು ಸಂಸ್ಕೃತ ಭಾಷಾಭ್ಯಾಸ ವನ್ನು ಆಶ್ಚರ್ಯಕರವಾದ ತೀವ್ರಗತಿಯಲ್ಲಿ ಸಾಧಿಸುತ್ತಿದ್ದಾರಂತೆ ! ಅವರ ಪಂಡಿತ ಅಶ್ವತ್ಥಯ್ಯ ಹೇಳುತ್ತಿದ್ದರು.

"ಹೌದೇನು ! ಸಂತೋಷ; ಷಡಕ್ಷರಯ್ಯನವರೇ, ಇವರ ವಿದ್ಯಾಗುರು ಗಳನ್ನೆಲ್ಲ ಒಮ್ಮೆ ಅರಮನೆಗೆ ಬರಮಾಡಿಕೊಳ್ಳಬೇಕೆಂದು ಯೋಚಿಸಿದ್ದೇನೆ, ಏರ್ಪಾಡು ಮಾಡಿಸಿ."

"ಅಪ್ಪಣೆಯಂತೆ ಆಗಲಿ ಅಮ್ಮಾಜೀ!" ಮಂತ್ರಿ ನಿರ್ಗಮಿಸಿದನು.

ಚೆನ್ನಮ್ಮ ವರ್ಷದಲ್ಲಿ ಒಂದೆರಡು ಸಲದಂತೆ ವರಕುಮಾರನ ವಿದ್ಯಾ ಗುರುಗಳನ್ನೆಲ್ಲ ಬರಮಾಡಿಕೊಂಡು ಸನ್ಮಾನಿಸಿ, ಮಗನ ಅಭ್ಯಾಸದ ಪ್ರಗತಿ ಯನ್ನು ತಿಳಿಯಹತ್ತಿದಳು. ಕನ್ನಡ–ಸಂಸ್ಕೃತಸಾಹಿತ್ಯ, ಧರ್ಮಶಾಸ್ತ್ರ,

ಸಂಗೀತ, ಕಲೆ, ಅಂಗಸಾಧನೆ, ವೈಹಾಳಿ ಮುಂತಾದ ಎಲ್ಲ ವಿದ್ಯೆಗಳಲ್ಲಿ ಬಸವಪ್ಪನಾಯಕ ನಿಷ್ಣಾತನಾಗಿ ಬೆಳೆಯುತ್ತಿದ್ದುದನ್ನು ಕಂಡು, ಹಡೆದ ಕಳುಳಿನ ತಾಯಿಗಿಂತ, ಪಡೆದ ಮಗನ ತಾಯಿ ಚೆನ್ನಮ್ಮಾಜಿಗೆ ಹೆಚ್ಚಿನ ಹೆಮ್ಮೆ ಯೆನಿಸಿತ್ತು. ಅದರೊಡನೆ ಆ ಸಮಯಕ್ಕೆ ಆ ತಾಯಿಗೆ ತನ್ನ ಕೌಟುಂಬಿಕ ಜೀವನದಲ್ಲಿಯ ಇನ್ನೂ ಒಂದು ಹೆಬ್ಬಯಕೆ ತಲೆದೋರಿತು. ತನ್ನ ಪ್ರೀತಿಯ ಮಗನಿಗೆ ವೈಭವದ ಮದುವೆ ಮಾಡಿ ಅಕ್ಕರೆ ಪಡೆಯುವದೇ ಆ ಬಯಕೆ. ಹೆಬ್ಬೆ ಮಹಂತಯ್ಯನ ಮಗಳು ಚೆನ್ನಮ್ಮ ಮಳಿಗೆ ಚೆನ್ನವೀರಪ್ಪನ ಮಗಳು ಚೆನ್ನಬಸವಮ್ಮ ಈ ಇಬ್ಬರು ಕನ್ಯಾರತ್ನಗಳನ್ನು ಗೊತ್ತುಮಾಡಿ ಅವರೊಡನೆ ರಾಜಕುಮಾರ ಬಸವಪ್ಪನಾಯಕನಿಗೆ, ಪ್ರಜಾಪರಿವಾರವೆಲ್ಲರ ಕಣ್ಮನಗಳು ತೃಪ್ತಿಪಡುವಂತೆ ಸಂಭ್ರಮದಿಂದ ಮದುವೆ ಮಾಡಿದಳು.

ಈ ಪ್ರಕಾರ ರಾಜ್ಯದ ಗಡಿಗಳ ರಕ್ಷಣೆಮಾಡುತ್ತ ಪ್ರಜೆಗಳನ್ನು ಕಾಪಾಡುತ್ತ, ಕುಮಾರನ ಅಭಿವೃದ್ಧಿಯನ್ನು ನೋಡುತ್ತ, ಸಂತಸಪಡುತ್ತ ಚೆನ್ನಮ್ಮಾಜಿ ಸುಖದಿಂದ ರಾಜ್ಯವಾಳುವದಕ್ಕೆ ಹದಿನೇಳು ವರ್ಷಸಂದಿದ್ದವು. ಆ ಹೊತ್ತಿಗೆ ಚೆನ್ನಮ್ಮನ ಸತ್ವಪರೀಕ್ಷೆಯ ಅತಿಕಠಿಣವಾದ ಸಂದರ್ಭ ಮತ್ತೊಂದು ಒದಗಿತು. ಅದು ಚಿರಸ್ಮರಣೀಯ ಸಂದರ್ಭವಾಗಿತ್ತು. ಅದರ ಹಿನ್ನಲೆ ಹೀಗಿದೆ :

ಮರಾಠಾರಾಜ್ಯ ಸಂಸ್ಥಾಪಕನಾದ ಛತ್ರಪತಿ ಶಿವಾಜಿ ಕ್ರಿ. ಶ. ೧೬೮೦ ರಲ್ಲಿ ನಿಧನವಾದನು. ಇಬ್ಬರು ಪತ್ನಿಯರ ಉದರಗಳಿಂದ ಕ್ರಮವಾಗಿ ಸಂಭಾಜಿ, ರಾಜಾರಾಮ ಎಂಬ ಇಬ್ಬರು ಗಂಡುಮಕ್ಕಳು. ಸಂಭಾಜಿ ಸಿಂಹಾಸನವೇರಿದನು. ಶಿವಾಜಿ ಕಾಲದ ಬಲಿಷ್ಠ ಮರಾಠಾ ಸರದಾರರು ರಾಜ್ಯಕ್ಕೆ ಆಧಾರಸ್ತಂಭರಾಗಿದ್ದರು. ಅವರ ನೆರವಿನಿಂದ ಸಂಭಾಜಿ ಮೊಗಲರ ಅಳವಿಗೆ ಸಿಕ್ಕದೆ, ಅವರ ರಾಜ್ಯದ ಕೆಲವು ಕೋಟೆಗಳನ್ನು ತಕ್ಕೊಂಡನು. ಆಗ ದಕ್ಷಿಣಾಪಥವನ್ನು ಗೆದ್ದು ಇಡೀ ಹಿಂದುಸ್ಥಾನಕ್ಕೆ ಏಕಛತ್ರಾಧಿಪತಿಯಾಗುವ ಮಹಾತ್ವಾಕಾಂಕ್ಷೆಯನ್ನು ತಾಳಿದ್ದ ಔರಂಗಜೇಬನು ತಾನೇ ದೊಡ್ಡ ದಂಡಿ ನೊಡನೆ ದಿಲ್ಲಿಯಿಂದ ದಕ್ಷಿಣಕ್ಕೆ ಬಂದನು. ವಿಜಾಪುರ–ಗೋವಳಕೊಂಡಗಳ ಬಾದಶಹರು ಪರಸ್ಪರ ಬೀಗರಾಗಿ–ಒಂದಾಗಿ–ತನ್ನ ವೈರಿಗಳಾದ ಮರಾಠರಿಗೆ

ಸಹಾಯಮಾಡುತ್ತಿದ್ದಾರೆ ಎಂದು ಔರಂಗಜೇಬನು ತಿಳಿದಿದ್ದನು. ಆದ್ದರಿಂದ ಮೊದಲು ಅವೆರಡು ರಾಜ್ಯಗಳನ್ನು ಮುರಿದು ತನ್ನ ರಾಜಕ್ಕೆ ಸೇರಿಸಿಕೊಂಡು ಬಿಟ್ಟನು. ಆ ರಾಜ್ಯಗಳ ಸರದಾರರು ಮರಾಠರನ್ನು ಕೂಡಿದ್ದರಿಂದ ಸಂಭಾಜಿಗೆ ಮತ್ತಿಷ್ಟು ಬಲಬಂದಿತು. ಅವನನ್ನು ಉಪಾಯದಿಂದ ಸೋಲಿಸ ಬೇಕೆಂದು ಔರಂಗಜೇಬನು ಯೋಚಿಸಿದನು. ಮತ್ತು ಸಂಭಾಜಿಯನ್ನು ವಂಚಿಸಲು ಕಲುಷನೆಂಬ ಕನೋಜಿ ಬ್ರಾಹ್ಮಣನನ್ನು ಕಳುಹಿದನು. ಆ ಧೂರ್ತ ಬ್ರಾಹ್ಮಣನು ಪನ್ನಾಳಗಡಕ್ಕೆ ಹೋಗಿ, ಪಾಂಡಿತ್ಯವನ್ನು ಪ್ರದರ್ಶಿಸಿ, ಸಂಭಾಜಿಯನ್ನು ಆಕರ್ಷಿಸಿ ಸ್ನೇಹ ಬೆಳೆಸಿದನು. ಮಂತ್ರ, ತಂತ್ರ, ವಶೀಕರಣ ಮುಂತಾದ ಕುಟೀಲ ಮಾಟಗಳನ್ನು ತೋರಿ ಸಂಭಾಜಿಯನ್ನು ಸುರಾಪಾನ–ವ್ಯಭಿಚಾರಗಳಲ್ಲಿ ಮಗ್ನನಾಗುವಂತೆ ಮಾಡಿದನು. ಒಂದು ದಿನ ಸಂದು ನೋಡಿ ಸಂಚುಮಾಡಿ ಸಂಭಾಜಿಯನ್ನು ಅವನ ಪಾಳಯದಿಂದ ಬೇರೆ ಆರಣ್ಯ ಸ್ಥಳದಲ್ಲಿ ಕರೆದೊಯ್ದು ಕುಡಿಸಿ ಮತ್ತನನ್ನಾಗಿಸಿದನು. ಆಗ ಮೊಗಲ ಸೈನಿಕರು ಬಂದು ಸಂಭಾಜಿಯನ್ನು ಸೆರೆಹಿಡಿದು ಬಾದಶಹನ ಬಳಿಗೆ ಒಯ್ದರು.

ಬಾದಶದಹ ಔರಂಗಜೇಬನು "ನೀನು ಮುಸಲ್ಮಾನನಾದರೆ ನಿನ್ನ ರಾಜ್ಯವನ್ನು ನಿನಗೆ ಕೊಟ್ಟು ನಿನ್ನನ್ನು ಬಿಟ್ಟುಬಿಡುವೆ"ನೆಂದು ಹೇಳಿದನು. ಬಾದಶಹನ ಮಗಳು ಬೇಗಮಳನ್ನು ಮೋಹಿಸಿದ್ದ ಸಂಭಾಜಿ, ಅವಳನ್ನು ತನಗೆ ಕೊಟ್ಟು ಮದುವೆ ಮಾಡಿದರೆ ಮುಸಲ್ಮಾನನಾಗುವೆನೆಂದು ಪ್ರತ್ಯುತ್ತರ ಕೊಟ್ಟನು. ಸಿಟ್ಟಿಗೆದ್ದ ಬಾದಶಹನು ಅವನ ಕಣ್ಣು ಕೀಳಿಸಿ ಕೊಲ್ಲಿಸಿದನು. ಅವನ ಹೆಂಡತಿಯನ್ನೂ ಚಿಕ್ಕಮಗ ಶಾಹುನನ್ನೂ ದಿಲ್ಲಿಗೆ ಕಳಿಸಿದನು.

ಸಂಭಾಜಿಯ ತಮ್ಮ ರಾಜಾರಾಮನು ಪನ್ನಾಳಗಡದಲ್ಲಿ ಪಟ್ಟಾಭಿಷಿಕ್ತನಾದನು. ಪನ್ನಾಳಗಡವನ್ನು ವಶಪಡಿಸಿಕೊಳ್ಳಲು ಮೊಗಲರ ದೊಡ್ಡ ದಂಡು ನಾಲ್ಕು ಕಡೆಯಿಂದ ಸಾಗಿಬಂದಿತು. ಈ ದಾಳಿಯನ್ನು ಎದುರಿಸಲಿಕ್ಕಾಗದೆ ರಾಜಾರಾಮನು (ಮೊದಲೆ ಸಂಭಾಜಿಯ ಮರಣದಿಂದ ಭಯಗ್ರಹಸ್ಥನಾದುದರಿಂದ) ಪನ್ನಾಳಗಡದಿಂದ ದಕ್ಷಿಣಕ್ಕೆ ಓಡಿಹೋದನು. ಅಷ್ಟರಲ್ಲಿ ವಿಜಾಪುರ ರಾಜ್ಯವು ಮೊಗಲರ ಆಧೀನವೇ ಆಗಿದ್ದುದರಿಂದ ಅಲ್ಲಲ್ಲಿಯೂ

ಅವನಿಗೆ ನಿಲ್ಲಲಿಕ್ಕೆ ಅನುವಾಗಲಿಲ್ಲ. ಕೆಲವೇ ಸೇವಕರೊಡನೆ ತಲೆಮರಿಸಿ ಕೊಂಡು ಕೆಳದಿಯ ರಾಜ್ಯಕ್ಕೆ ಬಂದನು. ತನ್ನನ್ನು ಸೆರೆಹಿಡಿಯಲು ಬೆನ್ನಟ್ಟಿ ಬರುತ್ತಿದ್ದಾರೆಂದು ಗೊತ್ತಾಯಿತು. ಚೆನ್ನಮ್ಮಾಜಿಯ ಆಶ್ರಯ ಬಯಸಿ ಆ ರಾಜ್ಯದ ಹೊನ್ನಾಳಿಯಲ್ಲಿ ಬಂದು ನಿಂತನು.

× × × × × ×

ಬಿದನೂರು ರಾಜಭವನದ ದ್ವಾರಪಾಲಕರಲ್ಲೊಬ್ಬನು ಒಳಗೆ ಬಂದು ದಿವಾಣಖಾನೆಯಲ್ಲಿ ರಾಣಿಗೆ ಕೈಮುಗಿದನು : "ಅಮ್ಮಾಜಿ ಹೊರಗಿನ ಮಹಾದ್ವಾರದ ಮುಂದೆ ಇಬ್ಬರು ದೃಢಕಾಯರಾದ ಸನ್ಯಾಸಿಗಳು ಬಂದು ನಿಂತಿದ್ದಾರೆ. ನೋಡಿನರೆ ಸನ್ಯಾಸಿಗಳಲ್ಲ, ವೇಷಧಾರಿಗಳೆನಿಸುತ್ತದೆ. ಮಹಾ ರಾಣಿಯವರನ್ನೇ ಕಂಡು ರಹಸ್ಯ ಸಂಗತಿ ತಿಳಿಸಬೇಕಾಗಿದೆಯೆಂದು ಹೇಳು ತ್ತಾರೆ. ಏನು ಅಪ್ಪಣೆ ?" ಎಂದನು.

ಚೆನ್ನಮ್ಮಾಜಿ, ಪ್ರಧಾನಿ ನರಸಪ್ಪಯ್ಯನ ಮುಖ ನೋಡಿ 'ಬರಲಿ, ಕರೆತನ್ನಿ' ಎಂದಳು.

"ಅವರ ಅಂಗಶೋಧನೆ ಮಾಡಿ ಕಾವಲಿನೊಡನೆ ಕರೆತನ್ನಿ" ವೃದ್ಧ ಪ್ರಧಾನಿ ಹೇಳಿದನು.

ದ್ವಾರಪಾಲಕ ಮರಳಿ ಹೋದನು. ಆ ಆದೇಶ ತಿಳಿಸಿದನು. ಆಗಂತುಕರು ತಮ್ಮ ಕೃತ್ರಿಮ ವೇಷವನ್ನು ಕಳಚಿ, ನಿಜವಾದ ಉಡುಪು ಧರಿಸಿದರು. ಹಗ್ಗಗಳಿಂದ ತಮ್ಮ ಕೈಗಳನ್ನು ತಾವೇ ಕಟ್ಟಿಕೊಂಡು ಒಳಗೆ ಬಂದು, ಮಹಾರಾಣಿಯ ಮುಂದೆ ಮಣಿದು 'ರಾಮ ರಾಮ' ಎಂದು ವಂದನೆ ಗೈದರು. ಅರಸಿ ವಂದನೆ ಸ್ವೀಕರಿಸಿ, ದಿಟ್ಟಿಸಿ ನೋಡಿದಳು. 'ಕೈಗಳನ್ನು ಬಿಚ್ಚಿಕೊಳ್ಳಿರಿ; ನೀವು ನಮ್ಮ ಅತಿಥಿಗಳು' ಎಂದಳು. ಅವರು ಹಾಗೆ ಕೈಗಳನ್ನು ಬಿಚ್ಚಿಕೊಂಡು ಮತ್ತೆ ಬಾಗಿ ಮುಜರೆ ಮಾಡಿದರು.

"ಯಾರು ನೀವ? ಏನು ಸಮಾಚಾರ?"

"ಮಾತಾಜಿ. ನಾವು ಮರಾಠರಾಜ್ಯಾಧಿಪತಿ ರಾಜಾರಾಮರ ದೂತ ಭಟರು. ನಮ್ಮ ಮಹಾರಾಜರು ತಮಗೆ ಬರೆದ ವಿನಂತಿಪತ್ರ ತಂದಿದ್ದೇವೆ.

ಇದನ್ನು ಪರಾಮರ್ಶಿಸಿ ತಮ್ಮ ಅಪ್ಪಣೆ ತಿಳಿಸಬೇಕು" ಎನ್ನುತ್ತ ಪತ್ರದ ಚೀಲವನ್ನು ರಾಣಿಯ ಮುಂದಿಟ್ಟು ಹಿಂದಕ್ಕೆ ಸರಿದರು. ರಾಣಿ ತೆಗೆದು ಕೊಂಡು ತೆರೆದು ನೋಡಿದಾಗ ಮರಾಠಿ ಲಿಪಿಯಲ್ಲಿತ್ತು. ಪ್ರಧಾನಿಯ ಕೈಗೆ ಕೊಟ್ಟಳು. ಆತನು ರಾಯಸದ ವೆಂಕಪ್ಪಯ್ಯನನ್ನು ಕರೆದು ಓದ ಹೇಳಿದನು. ಅದರ ಅರ್ಥ ಹೀಗಿತ್ತು:

"ಕೆಳದಿಯ ರಾಜ್ಯದ ಮಹಾರಾಜ್ಞಿ ಚೆನ್ನಮ್ಮದೇವಿಯವರಿಗೆ--
ತಮ್ಮ ಪುತ್ರಸಮ ಮರಾಠ ಛತ್ರಪತಿ ರಾಜಾರಾಮ ಭೋಸಲೆ, ನಮಸ್ಕಾರ ಪೂರ್ವಕ ವಿನಂತಿಸುವದೇನಂದರೆ,

ಮಾತಾಜಿ, ನಾನು ಸಂಕಟದಲ್ಲಿದ್ದೇನೆ. ತಮಗೆ ಮೊರೆಹೋಗಲು ತಮ್ಮ ರಾಜ್ಯದಲ್ಲಿ ಬಂದಿದ್ದೇನೆ. ಹೊನ್ನಾಳಿಯಲ್ಲಿ ಇದ್ದೇನೆ. ನನ್ನ ಅಣ್ಣ ಸಂಭಾಜಿ ರಾಜರನ್ನು ಮೋಸದಿಂದ ಹಿಡಿದು, ಕ್ರೂರತನದಿಂದ ಕೊಲ್ಲಿಸಿದ ಔರಂಗಜೇಬನು ಈಗ ನನ್ನ ಬೆನ್ನುಹತ್ತಿದ್ದಾನೆ. ವಿಜಾಪುರ, ಗೋವಳಕೊಂಡ ರಾಜ್ಯಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡು, ನಮ್ಮ ಸಿಂಹಾಸನವನ್ನೂ ಉರುಳಿಸಲು ಬರುತ್ತಿದ್ದಾನೆ. ಅವನ ಅಪಾರ ಸೇನೆ ಪನ್ನಾಳಗಡಕ್ಕೆ ದಾಳಿಯಿಟ್ಟಿದೆ. ಜೀವಭಯದಿಂದ ಓಡಿಬಂದಿದ್ದೇನೆ. ವಿಜಾಪುರವನ್ನು ಗೆದ್ದು ತಮ್ಮ ರಾಜ್ಯದ ಸೀಮೆಯನ್ನು ನಿಮ್ಮ ರಾಜ್ಯದ ಗಡಿಯವರೆಗೆ ವಿಸ್ತರಿ ಸಿದ್ದಾರೆ ಮೊಗಲರು. ನಿಮ್ಮ ರಾಜ್ಯಕ್ಕೆ ಬರುವವರೆಗೆ ನನಗೆ ನಿಲ್ಲಲಿಕ್ಕೆ ಎಲ್ಲಿಯೂ ಸ್ಥಳವೇ ಇರಲಿಲ್ಲ. ಬೆಂಗಾವಲದ ಭಟರೊಡನೆ ಮಾಡುವ ನನ್ನ ಪ್ರಯಾಣದ ವಿವರ ವೈರಿಗಳಿಗೆ ಗೊತ್ತಾಗಹತ್ತಿದ್ದರಿಂದ, ಭಟರನ್ನು ಹಿಂದಕ್ಕೆ ಬಿಟ್ಟು ವೇಷ ಮರೆಯಿಸಿ ಕೇವಲ ನಾಲ್ಕು ಜನರೊಂದಿಗೆ ಇಲ್ಲಿಗೆ ಬಂದಿದ್ದೇನೆ.

ನಿಮ್ಮ ರಾಜ್ಯದಲ್ಲಿ ಸುರಕ್ಷಿತವಾಗಿ ಹಾಯ್ದು ಹೋಗುವಂತೆ ನನಗೆ ಸಹಾಯ ಮಾಡಬೇಕು. ನಾನು ಚಂದಾವರ (ತಂಜಾವರ ?)ಕ್ಕೆ ನಮ್ಮ ಕಕ್ಕನ ಆಶ್ರಯಕ್ಕೆ ಹೋಗುವೆ. ನನ್ನ ಸಲುವಾಗಿ ನಿಮಗೆ ಅಪಾಯವಾಗುವ ಭೀತಿಯಿದೆ. ಆದರೂ ಅಸಹಾಯಕ ಸ್ಥಿತಿಯಲ್ಲಿದ್ದ ನನ್ನನ್ನು ದಯೆಯಿಂದ ಪಾರುಗಾಣಿಸಿ ಕಾಪಾಡಬೇಕೆಂದು ಪ್ರಾರ್ಥಿಸುವೆ. ಮಾತಾಜಿಯವರಿಗೆ ಪೊಡ ಮೊಟ್ಟು ಪ್ರತ್ಯಕ್ಷವಾಗಿ ಮೊರೆಯಿಡಲು ನಾನು ಬಯಸಿದೆ. ಆದರೆ ವೈರಿ

ಗಳು ಬೆನ್ನಟ್ಟಿ ಬರುತ್ತಿರುವದರಿಂದ, ಇದು ತಮಗೆ ತೀವ್ರ ಗಂಡಾಂತರ ಕಾರಿಯಾದೀತೆಂದು ಅನುಮಾನ; ತಮ್ಮ ಅಪ್ಪಣೆಯಾದರೆ ದರ್ಶನಕ್ಕೆ ಬರುವೆ, ಇಲ್ಲವಾದರೆ ಕಾವಲು ಪಡೆಯನ್ನು ಇಲ್ಲಿಗೇ ಕಳುಹಿದರೆ, ಹೊನ್ನಾಳಿಯಿಂದ ಪರಭಾರೆ ಹೋಗುವೆ. ಈಗ ಬಂದಿರುವ ನನ್ನ ಸೇವಕರು ದಾಮು ಮತ್ತು ರಘು ಇವರೊಡನೆ ತಮ್ಮ ಆಶ್ರಯದ ಅಪ್ಪಣೆ ಕಳಿಸಬೇಕೆಂದು ಪ್ರಾರ್ಥಿಸುವೆ. ಇವರ ಬಗೆಗಿನ ಸಂದೇಹದ ನಿವಾರಣೆಗೆ, ಇವರನ್ನು ತಮ್ಮ ಅಂಕೆಯ ಕಾವಲಿನಲ್ಲಿ ಕಳಿಸಬಹುದು....."

ಕ್ಷಣ ಹೊತ್ತು ಯೋಚಿಸಿ ಅರಸಿ ಚೆನ್ನಮ್ಮಾಜಿ : "ನಾಳೆ ಮಂತ್ರಿಗಳ ಸಭೆಯಲ್ಲಿ ಚರ್ಚಿಸಿ ತಿಳಿಸೋಣ" ಎಂದಳು.

"ಹಾಗೆ ಮಾಡುವದೇ ಒಳ್ಳೆಯದು. ಇದು ಸುಲಭವಾದ ಮಾತಲ್ಲ" ಎಂದು ಪ್ರಧಾನಿ ಸಮ್ಮತಿ ಸೂಚಿಸಿದನು.

"ಹಾಗಾದರೆ ಇವರಿಗೆ ಅತಿಥಿಗೃಹದಲ್ಲಿ ಬಿಡಾರ ಮಾಡಿಸಿ ಉಪಚರಿಸಿರಿ" ಎಂದು ನುಡಿದ ಚೆನ್ನಮ್ಮ ಆ ರಾಜದೂತರನ್ನು ಕುರಿತು : "ಅಣ್ಣಗಳಿರಾ, ನಾಳೆ ನಿರ್ಣಯ ಮಾಡಿ ನಿಮಗೆ ತಿಳಿಸುತ್ತೇವೆ. ಆ ವರೆಗೂ ನೀವು ಅತಿಥಿ ಗೃಹದಲ್ಲಿ ಇರಬೇಕು. ಅಲ್ಲಿ ನಿಮಗೆ ಎಲ್ಲ ಸೌಕರ್ಯ ಒದಗಿಸುತ್ತಾರೆ. ನೀವು ಆ ಗೃಹದ ಆವರಣದಿಂದ ಹೊರಗೆ ಹೋಗಕೂಡದು."

"ಆಗಲಿ ಅವ್ವಾಜಿ" ಎಂದು ಅವರು ರಾಮ್‌ರಾಮ್ ಎಂದು ಮುಜರೆ ಮಾಡಿದರು.

● ●

## ೬. ಮೂರ್ತಿವಂತ ವಿಜಯಶ್ರೀ

ಮರುದಿನ ಮಂತ್ರಿಮಂಡಲದ ಸಭೆ ನಡೆಯಿತು. ಪ್ರಮುಖ ಸಾಮಾಜಿಕ ಪ್ರತಿನಿಧಿಗಳನ್ನೂ ಕರೆಯಲಾಗಿತ್ತು. ಪ್ರಧಾನಿ ನರಸಪ್ಪಯ್ಯ ರಾಜಾರಾಮನ ಬಿನ್ನಪದ ಪ್ರಸ್ತಾಪ ಮಾಡಿದನು. ಅವನ ಪತ್ರವನ್ನೂ ಓದಲಾಯಿತು, ನರಸಪ್ಪಯ್ಯ ಇದು "ಧರ್ಮ ಸಂಕಟದ ಸಂದರ್ಭ" ಎಂದನು.

"ಧರ್ಮ ಬೆಳಗುವದು ಸಂಕಟದ ಸಂದರ್ಭದಲ್ಲಿಯೇ!" ಎಂದಳು ಚೆನ್ನಮ್ಮ. ಈ ಮಾತು ನಡೆಯಲಿರುವ ಚರ್ಚೆಗೆ ಬೆಳಕು ನೀಡಿತು.

"ಶಿವಾಜಿ ರಾಜ ತನ್ನ ಜೀವನದಲ್ಲಿ ಸಾಧಿಸಿದ ಮಹತ್ಕಾರ್ಯವನ್ನು ನೆನೆದು, ಆಪತ್ಕಾಲದಲ್ಲಿ ನಮ್ಮ ಮರೆಹೊಕ್ಕ ರಾಜಾರಾಮನಿಗೆ ಸಹಾಯ ಮಾಡುವದು ಧರ್ಮವಾಗಿದೆ. ಆದರೆ ಅದರಿಂದ ನಮಗೊದಗುವ ಗಂಡಾಂತರವನ್ನು ಎದುರಿಸುವ ನಮ್ಮ ಸಾಮರ್ಥ್ಯವನ್ನು ನಾವು ತಿಳಿದು ನೋಡಬೇಕು." ಕೊಳಿವಾಡದ ಬೊಮ್ಮಯ್ಯ ಹೇಳಿದನು.

ಅದನ್ನು ಮುಂದುವರಿಸಿ ಕೋಶಾಧ್ಯಕ್ಷ ಸಿದ್ಧಬಸಯ್ಯ ಆಂತರಿಕ ಕಳಕಳಿಯಿಂದ ಹೇಳಿದ್ದು ಹೀಗೆ : "ಹತ್ತೆಂಟು ವರ್ಷ ನಮ್ಮಲ್ಲಿ ಯುದ್ಧಗಳಾಗಿಲ್ಲ. ಪ್ರಜೆಗಳು ಸುಖದಿಂದ ಬಾಳುತ್ತಿದ್ದಾರೆ. ರಾಜ್ಯಕೋಶಗಳು ಸಮೃದ್ಧವಾಗಿವೆ. ಬಲಾಢ್ಯವಾದ ಬಾದಶಹನೊಡನೆ ವೈರ ಬೆಳಸಿ, ನಮ್ಮ ಸಂಪತ್ತುಗಳನ್ನು ವಿಧ್ವಂಸಗೊಳಿಸಿಕೊಳ್ಳುವ ಗಂಡಾಂತರಕ್ಕೆ ಸಿಕ್ಕಬಾರದೆಂದು ನನ್ನ ಮತ."

"ಹಾಗಾದರೆ ರಾಜಾರಾಮನನ್ನು ಮೊಗಲರಿಗೆ ಹಿಡಿದುಕೊಡಬೇಕೇ ?" ಎಂದು ದಳವಾಯಿ ಮುತ್ತೂರು ತಮ್ಮರಸಯ್ಯ ಕೇಳಿದಾಗ, "ಅದಾಗದು. ಅವನು ನಮ್ಮ ಮರೆಹೊಕ್ಕಿದ್ದಾನೆ." ಎಂದಳು ಅರಸಿ ಚೆನ್ನಮ್ಮಾಜಿ. "ದಳಪತಿ ಕೃಷ್ಣಪ್ಪಯ್ಯನವರು ಹೇಳುವದೇನು ?" ಎಂದು ಕೇಳಿದಳು.

"ಅಮ್ಮಾಜಿ ನಾವು ಹೇಳಿಕೇಳಿ ದಂಡಾಳುಗಳು. ರಾಜಕೀಯ ನಮಗೆ ತಿಳಿಯದು. ಮಹಾರಾಣಿಯವರ ಅಪ್ಪಣೆ ನೆರವೇರಿಸುವಲ್ಲಿ ಮೆರೆವ 'ವೀರ' ಒಂದೇ ನಮ್ಮ ಅಭಿಮಾನದ ವಿಷಯ ! ತಾವೇ ಹೇಳಿ !"

'ಸರಿ' ಎಂದ ಚೆನ್ನಮ್ಮ ಮುಂದುವರಿದು, "ಮರೆಹೊಕ್ಕವರನ್ನು ಯಾವ ಕಷ್ಟನಷ್ಟಗಳನ್ನು ಲೆಕ್ಕಿಸದೆ ಕಾಪಾಡುವದು ನಿಜಧರ್ಮ ! ಧರ್ಮ ಪಾಲನೆಗಾಗಿ ಸಂಕಟವನ್ನು ಮೈಮೇಲೆ ಹಾಕಿಕೊಂಡು ಅದನ್ನು ಎದುರಿಸಿ ಯಶಸ್ವಿಯಾದರೆ ಉಭಯಕೀರ್ತಿ–ಆತ್ಮಶಾಂತಿ; ಅಳಿದರೆ ಧರ್ಮಕ್ಕಾಗಿ ಅಳಿದ ಕೀರ್ತಿ, ತೃಪ್ತಿ. ಈಗ ರಾಜಾರಾಮನನ್ನು ಹಿಡಿದುಕೊಟ್ಟರೂ ಔರಂಗಜೇಬನ ಸ್ನೇಹವಾಗುವದು ಸಾಧ್ಯವಿಲ್ಲ. ಆಗ ಧರ್ಮಹಾನಿಯಲ್ಲದೆ ಸೋಲೂ ನಿಶ್ಚಯ ! ರಾಜಾರಾಮನನ್ನು ಔರಂಗಜೇಬನಿಗೆ ಬಲಿಯಾಗಗೊಡುವದು ಬೇಡ ! ಇದು ನನ್ನ ವೈಯಕ್ತಿಕ ಅಭಿಮತ ! ನೀವೆಲ್ಲರೂ ನಿರ್ಣಯಿಸಿದಂತೆ ನಡೆಯಲಿ. ಪೂಜ್ಯರು ಏನು ಹೇಳುವರು?" ಎಂದು ಗುರುಬಸವಪ್ಪ-ದೇವರತ್ತ ನೋಡಿದಳು. ಆ ಪೂಜ್ಯರು :

"ಅಮ್ಮಾಜಿ ಅವರ ಮಾತು ಸತ್ಯ ! ಔರಂಗಜೇಬನ ಮಹತ್ವಾಕಾಂಕ್ಷೆ ಮುಗಿಲೆತ್ತರದ್ದು. ದಕ್ಷಿಣಕ್ಕೆ ಬಂದು ವಿಂಧ್ಯಾದ್ರಿಯಿಂದ ವರದಾನದಿಯ ವರೆಗೆ ಕಾಲುಚಾಚಿರುವನು. ಅವನು ಕನ್ಯಾಕುಮಾರಿಯ ವರೆಗೆ ಸಾಮ್ರಾಜ್ಯ ಬೆಳಿಸುವ ಹಮ್ಮಾಸ ತಾಳಿದ್ದಾನೆ. ಮರಾಠ ರಾಜ್ಯವನ್ನು ಗೆದ್ದ ಬಳಿಕ ನಮ್ಮನ್ನು ಬಿಡಲಾರ! ಸ್ವಧರ್ಮದೀಕ್ಷೆಗೆ ಆಹ್ವಾನಿಸುವದು, ಇಲ್ಲವೆ ರಾಜ್ಯವನ್ನು ಕಬಳಿ ಸುವದು, ಅವನ ಉದ್ದೇಶ ! ನಾವೂ ಮರಾಠರಿಗೆ ಬೆಂಬಲವಿತ್ತರೆ, ಅಲ್ಲಿಯೇ ಅವನ ಶಕ್ತಿ ಕುಗ್ಗೀತು. ತರ್ಕಕ್ಕೆ ಮರೆಪೊಕ್ಕ ರಾಜಾರಾಮನನ್ನು ಕಾಪಾಡು ವದು ಉಚಿತವೆನಿಸುತ್ತದೆ."

ತಿಮ್ಮಣ್ಣನಾಯಕ ಹೇಳಿದ : "ಸಮಯ ಬಂದರೆ ಸಮರ ! ಹೆದರಿಕೆ ಏಕೆ?"

ಇದಕ್ಕೆ ಪ್ರತಿಯಾಗಿ ಸಚಿವನೊಬ್ಬನು "ನಾವು ಕಟ್ಟಿಕೊಳ್ಳುವದ್ವೇಷ ದಿಲ್ಲಿಯ ಸಮ್ರಾಟ ಬಾದಶಹನೊಡನೆ, ಇದನ್ನು ಗಮನಿಸಬೇಕು."

ಈ ಅಪಸ್ವರ ಕೇಳುವದು ಚೆನ್ನಮ್ಮನಿಗೆ ಆಗಲಿಲ್ಲ. ಏರು ದನಿಯಿಂದ ಅದನ್ನು ತಡೆದು ನುಡಿದಳು : "ಆದರೇನು ? ನಾವು ಮಾನವತೆಯನ್ನು ಮಾರಿಕೊಳ್ಳಬೇಕೆ ? ರಾಜಧರ್ಮ ಎಲ್ಲ ರಾಜರಿಗೂ ಒಂದೇ ! ಅನ್ಯಾಯದ ಆಕ್ರಮಣಕ್ಕೆ ಗುರಿಯಾಗಿ ಪ್ರಾಣಭಯದಿಂದ ಬಂದು ಮೊರೆಹೊಕ್ಕ ರಾಜ ನನ್ನು ರಕ್ಷಿಸಬೇಕೇ, ವೈರಿ ಬಹಳ ಬಲಾಢ್ಯನೆಂದು ಇವನನ್ನು ಅವನಿಗೆ ಬಲಿ ಗೊಡಬೇಕೇ ? ಇದು ವೀರರಿಗೆ ಒಪ್ಪುವ ಮಾತೇ ? ದೊಡ್ಡ ವೈರಿಯಿಂದ ಸಮರದಲ್ಲಿ ಸಾಯೋಣ. ರಾಜ್ಯವನ್ನು ಯಾರಾದರೂ ಆಳಲಿ. ಯಾರಾದರೂ ಪ್ರಜೆಗಳನ್ನು ಕಟುಕರಂತೆ ಕೊಲ್ಲುವದಿಲ್ಲ. ಅಂಜಿ ಕೈಮುಚ್ಚಿ ಕುಳಿತರೆ ಮಾರಿ ನುಂಗದೆ ಬಿಡದು, ಅದು ನನಗೆ ಬೇಡ! ಕೆಳದಿಯ ಯೋಧರು ಹೇಡಿಗಳೇ...?"

"ಅಲ್ಲ ಅಮ್ಮಾಜಿ, ನಾವೆಂದೂ ಹೇಡಿಗಳಲ್ಲ ! ತಮ್ಮ ಅಪ್ಪಣೆಯಂತೆ ಯುದ್ಧಕ್ಕೆ ಸಿದ್ಧ." ಕೃಷ್ಣಪ್ಪಯ್ಯ ಎದ್ದು ಆವೇಶದಿಂದ ಉದ್ಗರಿಸಿದಾಗ ದಳವಾಯಿಗಳೆಲ್ಲ ಎದ್ದು 'ಯುದ್ಧಕ್ಕೆ ಸಿದ್ಧ' ಎಂದರು.

"ಸರಿ ಸರಿ," ಎಂದ ಚೆನ್ನಮ್ಮಾಜಿ ಮುಂದುವರಿದು : "ಒಟ್ಟಿನಲ್ಲಿ ತಿಳಿಯಿತು. ಮೊರೆಹೊಕ್ಕವರನ್ನು ರಕ್ಷಿಸುವದು ದೇವಧರ್ಮ. ಅದನ್ನು ಪಾಲಿ ಸುವದು; ಹೊತ್ತುಬಂದರೆ ಯುದ್ಧ ಮಾಡುವದು ! ಕೆಳದಿಯ ಯೋಧರು ಕಡುಗಲಿಗಳು ! ಜಯ ವೀರಭದ್ರ !

ಎಲ್ಲರೂ ಉಗ್ಗಡಿಸಿದರು "ಜಯ ವೀರಭದ್ರ, ಚೆನ್ನಮ್ಮಾಜಿಗೆ ಜಯ ವಾಗಲಿ ! ಓಲಗದ ಕಾರ್ಯ ಮುಕ್ತಾಯಗೊಳಿಸುತ್ತ ಪ್ರಧಾನಿ ನರಸಪ್ಪಯ್ಯ ಬಿನ್ನವಿಸಿದ :

"ಈಗ ಹೀಗೆ ಮಾಡೋಣ; ರಾಜಾರಾಮ ರಾಜರನ್ನು ರಾಜಧಾನಿಗೆ ಬರುವಂತೆ ಮಾಡಿ, ಸಮಸ್ಯೆಯನ್ನು ಒಮ್ಮಿಂದೊಮ್ಮೆ ತೀಕ್ಷಣಗೊಳಿಸುವದು ಬೇಡ. ಅವರ ರಕ್ಷಣೆ ಮುಖ್ಯ ! ಅವರ ದೂತರೊಡನೆ ಒಂದು ಕಾವಲು ಪಡೆಯನ್ನೇ ಕಳಿಸೋಣ. ಅವರೊಡನೆ ನಮ್ಮ ರಾಯಭಾರಿ ಶರಜಾಶಂಕರ-ನಾರಾಯಣರೂ ಹೋಗಿ ಮುಖತಃ ಮಹಾರಾಣಿಯವರ ಆದೇಶ ತಿಳಿಸಲಿ. ಲಿಖಿತ ಆದೇಶ ಅವಶ್ಯವಿಲ್ಲ. ಅಲ್ಲದೆ ಅವರ ಪ್ರಯಾಣದ ಯೋಜನೆ ಮಾಡಿ ಕೊಟ್ಟು ರಾಯಭಾರಿಗಳು ಮರಳಿ ಬರಲಿ," ಎಂದು ಆಜ್ಞೆಗಾಗಿ ಮಹಾರಾಣಿ

ಯುವರತ್ತ ನೋಡಿದನು. “ಸರಿಯಿದೆ ವ್ಯವಸ್ಥೆ ಮಾಡಿರಿ” ಎಂದಳು ಚೆನ್ನಮ್ಮಾಜಿ.

ಯೋಜಿತ ಕಾರ್ಯಗಳು ತ್ವರಿತವಾಗಿ ಸಾಗಿದವು. ಕೆಳದಿಯ ಅರಸಿಗೆ ರಾಜಾರಾಮನು ಶಂಕರನಾರಾಯಣನೊಡನೆ ಕೃತಜ್ಞತೆಗಳನ್ನು ವಂದನೆಗಳನ್ನು ತಿಳಿಸಿದನು. ಕೆಳದಿಯ ಭಟರ ನಾಯಕನು ಆ ರಾಜನಿಗೂ ದೂತರಿಗೂ ಬೇರೆ ವೇಷ ಹಾಕಿಸಿ, ಹೊನ್ನಾಳಿಯಿಂದ ಹೊರಟು, ಗಾಜನೂರು ಹೊಳೆ ದಾಟಿಸಿ ಅರಣ್ಯಗಳ ಮರೆಯ ದಾರೀ ಹಿಡಿದು, ಬೊರನೆಡೆವಳ್ಳಿ, ಆಡುವಳ್ಳಿ, ಖಳಸ, ಖಾಂಡ್ಯ ವಸುಧಾರೆಗಳ ಮೇಲಿಂದ ಚಂದಾವರಕ್ಕೆ ಸುರಕ್ಷಿತವಾಗಿ ತಲುಪಿಸಿ ಬಂದನು.

ರಾಜಾರಾಮನು ಪನ್ನಾಳಗಡದಿಂದ ಪಲಾಯನ ಮಾಡಿದುದು ತಿಳಿದೊಡನೆ, ಅವನನ್ನು ಹಿಡಿಯಲು ರಣಮಸ್ತಖಾನನೆಂಬ ಸರದಾರನ ನೇತೃತ್ವದಲ್ಲಿ ಮೊಗಲರ ದಂಡಿನ ಒಂದು ಭಾಗ ಬೆನ್ನಟ್ಟಿತು. ರಾಜಾರಾಮ ಹೋದ ಬಳಿವಿಡಿದು ಧಾರವಾಡದ ದಕ್ಷಿಣಕ್ಕೆ ಬರುತ್ತಿರುವಾಗ ಮೂವರು ಮರಾಠ ರಾಹುತರು ಅವರ ಕೈಗೆ ಸಿಕ್ಕರು. ಅವರಿಂದ ರಾಜಾರಾಮ ಹೋದುದೆಲ್ಲಿ ಎಂಬುದು ತಿಳಿಯಲಿಲ್ಲ. ರಣಮಸ್ತಖಾನನು ಅವರನ್ನು ಸೆರೆ ಹಿಡಿದು ಹೊನ್ನಾಳಿಗೆ ಬಂದು ಇಳಿದನು. ಅಲ್ಲಿ ರಾಜಾರಾಮನ ವಸ್ತ್ರಗಳು ಮುಂತಾದ ಕೆಲವು ವಸ್ತುಗಳು ಅವನ ಕೈಗೆ ಸಿಕ್ಕವು. ಖಾನನು ಚೆನ್ನಮ್ಮಾಜಿಗೆ, ‘ನಮ್ಮ ರಾಜಕೀಯ ಅಪರಾಧಿ ನಿಮ್ಮ ಆಶ್ರಯದಲ್ಲಿದ್ದಾನೆ. ಅವನನ್ನು ನಮಗೆ ಒಪ್ಪಿಸಬೇಕು; ಎಂದು ಪ್ರಬಲ ರಾಹುತರೊಡನೆ ಹೇಳಿಕಳಿಸಿದನು. ಅದಕ್ಕೆ ಚೆನ್ನಮ್ಮ ಕಳಿಸಿದ ಉತ್ತರ ಹೀಗೆ :

‘ಮರಾಠ ರಾಜನು ನಮ್ಮ ರಾಜ್ಯದಲ್ಲಿ ಬಿಚ್ಚಾಳಾಗಿ ಹಾಯ್ದು ಹೋಗಿದ್ದಾನೆ. ನಾವು ಬಚ್ಚಿಟ್ಟುಕೊಂಡಿಲ್ಲ. ಯಾರ ರಾಜ್ಯದಲ್ಲಾದರೂ ಪ್ರವಾಸಿಕರು ಹಾಯ್ದು ಹೋಗುವದು ಸಾಮಾನ್ಯ! ಅವನ ಕೆಲವು ಉಡುಪು ನಮ್ಮವರ ಕೈಗೆ ಸಿಕ್ಕಿದ್ದವು. ಅವನ್ನು ನಿಮಗೆ ಕೊಟ್ಟಿದ್ದಾರೆ. ನಿಮ್ಮ ಬಿಡಿಯಾಳುಗಳು ಮಾತ್ರ ನಮ್ಮ ರಾಜ್ಯದಲ್ಲಿ ಅರಸನನ್ನು ಶೋಧಿಸಬಹುದು.

ಆದರೆ ನೀವು ಈಗ ದಂಡು ಸಹಿತ ನಮ್ಮ ರಾಜ್ಯದಲ್ಲಿ ಬಂದಿದ್ದೀರಿ. ಈ ಕೂಡಲೆ ಗಡಿಯಿಂದ ಆಚೆಗೆ ಹಿಂದೆ ಸರಿಯಬೇಕು. ಇಲ್ಲವಾದರೆ ಹಿಂದೆಗೆ ಯಿಸಬೇಕಾದೀತು!"

ಮಾರುತ್ತರ ಕೇಳಿ 'ಅಬ್ಬಾ' ಎಂದನು ರಣಮಸ್ತಖಾನ! ಇವಳು ಮಹಿಳೆ ಎಂದು ಬೆದರಿಸಬೇಕೆಂದಿದ್ದನೇನೋ? ಈ ಕೆಚ್ಚುಳ್ಳ ಉತ್ತರಕ್ಕೆ ಖತಿಗೊಂಡು ತಾತ್ಕಾಲಿಕ ಹಿಂದೆ ಸರಿದನು. ಮಲೆನಾಡ ಕಾಡಿನಲ್ಲಿ ರಾಜಾ ರಾಮನನ್ನು ಹುಡುಕುವ ಹವ್ಯಾಸ ಮಾಡಲಿಲ್ಲ. 'ಕೆಳದಿಯ ರಾಣಿ ಅರಿವೆ ಮಾತ್ರ ಕೊಟ್ಟು ರಾಜಾರಾಮನನ್ನು ಅಡಗಿಸಿಟ್ಟಿದ್ದಾಳೆ' ಎಂದು ಪತ್ರ ಬರೆದು, ತೀವ್ರಗತಿಯ ರಾಹುತರೊಂದಿಗೆ ಔರಂಗಜೇಬ ಬಾದಶಹನಲ್ಲಿಗೆ ಕಳಿ ಸಿದನು. ಮರಾಠಾ ಸೆರೆಯಾಳುಗಳನ್ನೂ ರಾಣಿಯ ಪತ್ರವನ್ನೂ ಕೂಡ ಕಳಿಸಿದನು. (ಬಾದಶಹನು ಆಗ ಬ್ರಹ್ಮಪುರಿಯಲ್ಲಿ (ಗಲಗಲಿಯಲ್ಲಿ) ಇದ್ದನೆಂದು ಇತಿಹಾಸಕಾರರು ಹೇಳುತ್ತಾರೆ.) ಬಾದಶಹನಿಗೆ ನೆವ ಬೇಕಾಗಿತ್ತು. ರಣಮಸ್ತ ಖಾನನ ವರದಿಯಿಂದ ಕೋಪಾವಿಷ್ಟನಾದನು. ಕೆಳದಿಯ ಸಂಸ್ಥಾನವನ್ನೇ ವಶಪಡಿಸಿಕೊಳ್ಳಬೇಕೆಂದು ನಿರ್ಧರಿಸಿದನು.

ತನ್ನ ಮಗ ಅಜಮತಾರನ ವಶದಲ್ಲಿ ಅಪರಿಮಿತ ಆನೆ, ಕುದುರೆ, ಪದಾತಿಗಳ ಸೇನೆಯನ್ನು ಕೊಟ್ಟು ಕಳಿಸಿದನು. ಅಜಮತಾರನು ಅದನ್ನು ಸಾಗಿಸಿಕೊಂಡು ಮದಗದ ಕೆರೆಯ ಬಂಡಿ ತಿಮ್ಮಾಯಿ ಕಣಿವೆಯಲ್ಲಿ ಬೀಡು ಬಿಟ್ಟನು. ಭೀಕರ ಯುದ್ಧದ ಯೋಜನೆ ಮಾಡಹತ್ತಿದನು. ಇದನ್ನು ನಿರೀಕ್ಷಿಸಿದ್ದ ಕೆಳದಿಯ ದಂಡನಾಯಕರು ಯುದ್ಧಕ್ಕೆ ಸನ್ನದ್ಧರಾದರು. ಚೆನ್ನಮ್ಮಾಜಿ ಬೆದರಲಿಲ್ಲ. ದೇವರಲ್ಲಿ, ಧರ್ಮದಲ್ಲಿ ನಂಬಿಗೆಯಿಟ್ಟು ವೈರಿ ಗಳನ್ನು ಹೊಡೆದೋಡಿಸಲು ಟೊಂಕಕಟ್ಟಿದಳು.

ಅಜಮತಾರನು ಶರಜಾಖಾನನೆಂಬ ಸೇನಾಪತಿಯನ್ನು ಸುಸಜ್ಜಿತ ಸೇನೆ ಯೊಡನೆ ಕೆಳದಿಯ ರಾಜ್ಯದೊಳಗೆ ಕಳಿಸಿದನು. ಆತನು ಒಳಹೊಕ್ಕು ದಾಳಿ ಮಾಡುತ್ತ ಗಡಿಯಲ್ಲಿಯ ಮಹಾದೇವಪುರ ಕೋಟೆಯನ್ನು ಹಿಡಿದುಕೊಂಡನು. ಅಜಮತಾರನು ಅಲ್ಲಿ ಬಂದು ಬಿಡಾರ ಮಾಡಿದನು. ಅಲ್ಲಿಂದ ಶರಜಾ ಖಾನನು ಮುಂದೆ ಸಾಗಿ, ಹೊನ್ನಾಳಿ ಪರಿಸ್ತರಣವನ್ನು ಆಕ್ರಮಿಸಿ ಅಲ್ಲಿ

ಸನ್ನಾಹವನ್ನಿಟ್ಟು ಬಿದನೂರು ಪುರಕ್ಕಾಗಿ ಮುಂದುವರೆದನು. (ಕ್ರಿ. ಶ. ೧೬೯೦ ಮೇ.) ರಣಮಸ್ತುಖಾನನು ಅವನಿಗೆ ಸಹಾಯಕನಾಗಿ ಮತ್ತೊಂದು ಬದಿಯಿಂದ ಏರಿಬಂದನು. ಅಜಮತಾರನು ಹೊನ್ನಾಳಿಯಲ್ಲಿ ತನ್ನ ಕೇಂದ್ರ ವನ್ನು ಇಟ್ಟನು.

ಹಿಂದೆ ವಿಜಾಪುರದ ೨ನೆಯ ಅಲ್ಲೀ ಆದಿಲಶಹನು ಬಿದನೂರನ್ನು ಆಕ್ರಮಿಸಿದಾಗ, ಅವನನ್ನು ಹೊರಗಿನಿಂದ ಮುತ್ತಿ, ಹಣ್ಣು ಮಾಡಿದ ಅನುಭವದ ಆಧಾರದ ಮೇಲೆ ಚೆನ್ನಮ್ಮಾಜಿ ಈಗಿನ ಯುದ್ಧತಂತ್ರವನ್ನು ರೂಪಿಸಿದಳು. ದಂಡಿನ ಎಲ್ಲ ಅಧಿಕಾರಿಗಳನ್ನು ಕೂಡಿಸಿ ಅದನ್ನು ಅವರ ಮುಂದಿಟ್ಟು, ಅವರವರ ಕೆಲಸ ವಹಿಸಿಕೊಟ್ಟು, ವಿಧಾನಗಳನ್ನು ತಿಳಿಸಿದಳು. ರಾಜ್ಯದಲ್ಲಿ ಪ್ರತಿಯೊಂದು ಕೋಟೆಯ ಕೊತವಾಲರು ತಮ್ಮ ದಳಗಳನ್ನು ಸಿದ್ಧವಾಗಿಟ್ಟರು. ಅಲ್ಲಲ್ಲಿ ಗಜದಲ, ಅಶ್ವದಲಗಳು ಹಣ್ಣೆಕೊಂಡು ನಿಂತವು. ಕಣಿವೆ ಮಾರ್ಗದ ಕಾಳಗಗಳಿಗೆ ಅಗತ್ಯವಾದ ಒಡ್ಡರ, ಗುಡ್ಡರ ಪಡೆಗಳು, ಮಿಂಚುದಾಳಿಯ ಬೇಡರ ಪಡೆಗಳು ಸಂಘಟಿತವಾದವು. ಚೆನ್ನಮ್ಮಾಜಿ ಒಮ್ಮೆ ಸ್ವತಃ ಪರಿಶೀಲಿಸಿದಳು ಈ ಸಿದ್ಧತೆ ಪೂರ್ಣವಾಗುವದರೊಳಗಾಗಿ ಹೊನ್ನಾಳಿ ವೈರಿಗಳ ಬೀಡಾರವಾಗಿತ್ತು. ಬಿದನೂರು ದಾಳಿಗೆ ಗುರಿಯಾಗಿತ್ತು.

ರಾಣಿ, ಯುವರಾಜ ಬಸಪ್ಪನಾಯಕನ ನೇತೃತ್ವದಲ್ಲಿ ರಾಜಭವನದ ಮಂದಿಯನ್ನು, ಕೋಶವನ್ನು ಭುವನಗಿರಿಗೆ ಕಳಿಸಿದಳು. ಭುವನಗಿರಿ ಭದ್ರವಾದ ಗಿರಿಕೋಟೆ. ಬುದ್ಧಿಜೀವಿಗಳನ್ನು, ಅಶಕ್ತರು ಮುಂತಾದವರನ್ನು ಸುರಕ್ಷಿತ ಸ್ಥಳಗಳಿಗೆ ಕಳಿಸಿದಳು. ನಗರದ ರಕ್ಷಣೆಗೆ ಮುತ್ತೂರು ತಮ್ಮರಸನನ್ನು ಸಾವಿರಕ್ಕೆ ಮಿಕ್ಕಿದ ಸೈನ್ಯದೊಡನೆ ಕೋಟೆಯಲ್ಲಿಟ್ಟು ಭದ್ರಪಡಿಸಿದಳು. ತಿಮ್ಮಣ್ಣ, ಕೃಷ್ಣಪ್ಪಯ್ಯ ಇವರ ಆಧೀನದಲ್ಲಿ ಎರಡು ಪ್ರಬಲ ಪಡೆಗಳನ್ನು ಹೊರಗೆ ಬೇರೆ ಬೇರೆ ಕಡೆಗೆ ಇರಿಸಿದಳು. ಯುದ್ಧದ ಚಟುವಟಿಕೆಗಳ ಮೇಲ್ವಿಚಾರಣೆಗಾಗಿ ನಡುವೆ ತಾನು ಹೊರಗೆ ಉಳಿದಳು ಬೇಹುಗಾರರಿಂದ ತನ್ನ ಕಿವಿಗೆ ಬರುತ್ತಿದ್ದ ಈ ವ್ಯವಸ್ಥೆಗಳ ಸಂದ್ದಿಗಳಿಂದ ಅಜಮತಾರನು ಆಶ್ಚರ್ಯಚಕಿತನಾದನು. ಕೊಂಚ ಅಧೀರನೂ ಆಗಿರಬೇಕು..

ಮೊಗಲರ ದಂಡುಗಳು ತೆರೆತೆರೆಯಾಗಿ ಬಿದನೂರು ಕೋಟೆಗೆ ಲಗ್ಗೆ ಹತ್ತುವದಕ್ಕಾಗಿ ಏರಿಬರುತ್ತಿದ್ದವು. ಅಳವಿಗೆ ಮಿಕ್ಕಿದಂತಾಗಲು ಹಿಂದೆ ಸರಿದು ಮತ್ತೆ ಹೆಚ್ಚಿನ ಯತ್ನದಲ್ಲಿ ತೊಡಗುತ್ತಿದ್ದವು. ಆದರೆ ಮೊಗಲರ ದಂಡಿನ ಶಿಬಿರಗಳಿಗೆ ಪೂರೈಸುವದಕ್ಕಾಗಿ, ಸುತ್ತಲಿನ ಗ್ರಾಮಗಳಿಂದ ದೋಚಿ ತರಲು ಹೋಗುತ್ತಿದ್ದ ಮೊಗಲರ ಚಿಕ್ಕ ಚಿಕ್ಕ ಪಡೆಗಳು ಕೆಳದಿಯ ಬಲ್ಲಾಳು ಗಳಿಂದ ಅಲ್ಲಲ್ಲೇ ನಾಶವಾಗಪತ್ತಿದವು. ಮೊಗಲರಿಗೆ ಆಹಾರ ಕೊರತೆ ಯಾಯಿತು. ಇನ್ನೇನು ಕೋಟೆಯನ್ನು ವಶಪಡಿಸಿಕೊಳ್ಳುತ್ತೇವೆ. ಅಲ್ಲಿ ಆಹಾರವಿದೆ ಎನ್ನುವ ಹೊತ್ತಿಗೆ ತಿಮ್ಮಣ್ಣ, ಕೃಷ್ಣಪ್ಪಯ್ಯಗಳು ಎರಡು ಕಡೆಯಿಂದ ಅವರ ಶಿಬಿರಗಳ ಮೇಲೆ ಬಲವಾದ ಹಲ್ಲೆ ಹೂಡಿದರು. ಮೊಗಲರ ಅಪರಿಮಿತ ಸೇನೆ ಯಮಸದನ ಸೇರಿತು. ಅಜಮತಾರನು ಇವರ ಸಹಾಯಕ್ಕೆ ಬಾರದಂತೆ ಚೆನ್ನಮ್ಮಾಜಿ ಮೊದಲೇ ಎಚ್ಚರ ವಹಿಸಿದ್ದಳು. ಬೇರೆ ದುರ್ಗಕೋಟೆಗಳ ಕಾದಿಟ್ಟ ಪಡೆಗಳನ್ನೂ, ಬೇಡರ ಪಡೆಯನ್ನೂ ಕೂಡಿಸಿ ಮೂರನೆಯ ಒಂದು ದಂಡನ್ನು ಸಿದ್ಧಪಡಿಸಿದಳು. ಅಜಮತಾರನು ಬಿದನೂರಿಗೆ ಹೆಚ್ಚಿನ ಬಲ ಕಳಿಸುವದನ್ನು ತಡೆಯುವದಕ್ಕಾಗಿ ಈ ದಂಡನ್ನು ಹೊನ್ನಾಳಿಯ ಕಡೆಗೆ ಸ್ವತಃ ಸಾಗಿಸಿದಳು. ಅಲ್ಲೊಂದು ರಣರಂಗ ಏರ್ಪಟ್ಟಿತು. ಆಹಾರಸಾಮಗ್ರಿಗಳ ಸಂಪಾದನೆಗೆ ಆತಂಕ, ಮಿಂಚಿನ ದಾಳಿ ಇವುಗಳಿಂದ ಅಜಮತಾರ ಮೊದಲೇ ವಿವಂಚನೆಗೊಳಗಾಗಿದ್ದನು. ಅನಿ ವಾರ್ಯವಾಗಿ ಅಲ್ಲಿ ಕಾಳಗಕ್ಕೆ ನಿಲ್ಲಬೇಕಾಯಿತು. ಮಲೆನಾಡಿನ ಅಪರಿಚಿತ ಪ್ರದೇಶ ಮುಂಗಾರು (ನೈಋತ್ಯ ಮಾನ್ಸೂನ) ಆರಂಭವಾಗುತ್ತಲಿತ್ತು. ಮೊಗಲರ ಕೈ ಸಾಗದೆ ಅವರ ಬಹುಪಾಲು ದಂಡು ಮಡಿದು ಹೋಯಿತು. ಅಜಮತಾರನು ಹಿಂದೆ ಸರಿದು ಹೊನ್ನಾಳಿಯನ್ನು ಆಶ್ರಯಿಸಿದನು. ಇನ್ನು ಕೆಳದಿಯ ದಂಡುಗಳೆಲ್ಲ ಒಟ್ಟುಗೂಡಿ ತನ್ನನ್ನು ಸುತ್ತುಗಟ್ಟುವವೆಂದು ಅವನು ಹೆದರಿದನು.

ಅತ್ತ ಔರಂಗಜೇಬನಿಗೆ, ರಾಜಾರಾಮ ಚಂದಾವರ ತಲುಪಿ ಆಶ್ರಯ ಪಡೆಯುತ್ತಿದ್ದಾನೆಂಬ ಸುದ್ದಿ ತಲುಪಿದೊಡನೆ, ಜುಲಫರಖಾನನೊಡ ಮತ್ತೊಂದು ಸೇನೆಯನ್ನು ಹೊಸಪೇಟೆಯ ಮಾರ್ಗವಾಗಿ, ರಾಜಾರಾಮ

ನನ್ನು ಬಂಧಿಸಿ ತರಲು ಕಳಿಸಿದನು. ಆ ದಳ ಚಿತ್ರದುರ್ಗ, ಶಿರಾ, ನಾಯಕ ರಿಂದ ಕಷ್ಟನಷ್ಟಗಳನ್ನು ಅನುಭವಿಸಿ ಅಳಿಯುತ್ತ ಹೋಗಿತ್ತು. ಅತ್ತ ಮರಾಠಾ ಸರದಾರರು ಅಭಿಮಾನದಿಂದ ಸಂಘಟನೆ ಮಾಡಿಕೊಂಡು ಬಾದ-ಶಹನ ಮತ್ತೊಬ್ಬ ಮಗನ ದಂಡಿನೊಡನೆ ಹೋರಾಡಿ ತಮ್ಮ ಕೋಟೆಗಳನ್ನು ತಿರುಗಿ ತಕ್ಕೊಳ್ಳಹತ್ತಿದರು. ಈ ಪರಿಸ್ಥಿತಿಯಲ್ಲಿ ತಂದೆಯ ಕಡೆಯಿಂದ ಹೆಚ್ಚಿನ ನೆರವು ಬರುವದಿಲ್ಲವೆಂದು ಅಜಮತಾರನಿಗೆ ಗೊತ್ತಾಯಿತು. ಆತನು ಚೆನ್ನಮ್ಮಾಜಿಯೊಡನೆ ಒಡಂಬಡಿಕೆಗೆ ಸಿದ್ಧನಾದನು.

ಮಹಾರಾಣಿಯ ಕಡೆಯಿಂದ ಮಾತುಕತೆಗಳಿಗಾಗಿ ಶರಜಾ ತಿರುಮಲಯ್ಯ ಬಂದನು. ಒಪ್ಪಂದದ ಕರಾರುಗಳು ಹೀಗಾದವು:

೧. ಮೊಗಲರ ದಂಡು ಪೂರ್ಣವಾಗಿ ಕೆಳದಿಯ ರಾಜ್ಯದಿಂದ ಹೊರಗೆ ಹೋಗಬೇಕು.

೨. ಆ ದಂಡು ಗಡಿಯನ್ನು ದಾಟುವವರೆಗೆ ಅದಕ್ಕೆ ಆಹಾರಸಾಮಗ್ರಿ ಗಳನ್ನು ಕೆಳದಿಯ ರಾಜ್ಯದಿಂದ ಪಡೆಯಬೇಕು.

೩. ಕೆಳದಿಯ ರಾಜ್ಯದ ಮೇಲೆ ವಿಜಾಪುರದ ಬಾದಶಹರ ಹಿಡಿತ (ಸಾರ್ವಭೌಮತ್ವ) ಯಾವಾಗಲೂ ಇರಲಿಲ್ಲ. ಈಗ ವಿಜಾಪುರ ರಾಜ್ಯವನ್ನು ವಶಪಡಿಸಿಕೊಂಡಿರುವ ಮೊಗಲ ಬಾದಶಹರ ಚಕ್ರಾಧಿಪತ್ಯವೂ ಕೆಳದಿ ರಾಜ್ಯದ ಮೇಲೆ ಉಂಟಾಗುವದಿಲ್ಲ. ಕೆಳದಿ ಸ್ವತಂತ್ರ ರಾಜ್ಯವೆಂದು ಬಾದಶಹನಿಂದ 'ಫರಮಾನ' ಹೊರಡಿಸುವ ಹೊಣೆಯನ್ನು ಅಜಮತಾರನು ಹೊತ್ತು ಕೊಳ್ಳಬೇಕು.

ಈ ವಿಜಯಶ್ರೀಯನ್ನು ಕೆಳದಿ ನೃಪವಿಜಯದ ಕರ್ತೃ ಲಿಂಗಕವಿಯ ವಾಣಿಯಲ್ಲಿ ಹೇಳುವುದಾದರೆ ಹೀಗೆ:

'ಡಿಲ್ಲಿಯ ಔರಂಗಜೇಬನ ಫೌಜಂ ಗೆಲ್ದು, ರಾಜ್ಯ-ರಾಷ್ಟ್ರಂಗಳಂ ಸಲಹಿ, ತನ್ನ ಮೊರೆವೊಕ್ಕ ಆರೆಯರ ಅರಸನೆನಿಪ್ಪ ರಾಜಾರಾಮನಂ ಪೊರೆದು ಚಲ ಪದಮಂ ಮೆರೆದು, ಸಮಸ್ತ ನೃಪಾಲಮಂಡಲ ಮಧ್ಯದೊಳ್ ಅತ್ಯಂತ ಪ್ರಖ್ಯಾತಿಯಂ ಪಡೆದು ವಿರಾಜಿ (ಸುತ್ತಮಿರಲ್) ಸಿದಳು.'

ಉತ್ತರದ ಬಹು ದೂರದ ವರೆಗೂ ಕನ್ನಡನಾಡಿನ ಕಲಿಗಳ ಕೆಚ್ಚು ತೋರಿದ ಚೆನ್ನಮ್ಮಾಜಿ ಮೂರ್ತಿಮಂತ ವಿಜಯಶ್ರೀ ಆಗಿದ್ದಳು.



## ೭. ಶುಭಗುಣಗಣ ಸಂಪನ್ನೆ

ಕೆಳದಿಯ ರಾಜ್ಯದಲ್ಲಿ ವಿಜಯೋತ್ಸವಗಳು ನಡೆದವು. ದೇವಸ್ಥಾನಗಳಲ್ಲಿ ವೈಭವದ ಪೂಜಾ ಸಮಾರಂಭಗಳು ಜರುಗಿದವು. ಮಹಾರಾಣಿ ದೊಡ್ಡ ದರಬಾರ ನೆರೆಯಿಸಿ ಕಾಳಗದಲ್ಲಿ ಕಲಿತನದಿಂದ ಕಾದಿದ ಪಟುಭಟರನ್ನು ಸನ್ಮಾನಿಸಿದಳು. ವೀರಾಗ್ರಣಿಗಳಿಗೆ ಉಂಬಳಿ ಹಾಕಿಕೊಟ್ಟಳು. ವಿಜಯೋತ್ಸವದ ಅಂಗವಾಗಿ ಸಕಲ ಪರಿವಾರವನ್ನು, ಮಂತ್ರಿಗಳನ್ನು ಒಡಗೊಂಡು ಸುಬ್ರಹ್ಮಣ್ಯೇಶ್ವರ ಯಾತ್ರೆಮಾಡಿ ಬಂದಳು. ತನ್ನ ಕುಮಾರನಿಂದ ಕುಮಾರಸ್ವಾಮಿಗೆ ವಿಧ್ಯುಕ್ತ ಪೂಜೆ ಮಾಡಿಸಿದಳು. ಚೆನ್ನಮ್ಮಾಜಿ ಪ್ರತಾಪಶಾಲಿನಿಯೆನಿಸಿದಳು. ಕೆಳದಿಯನ್ನು ಈಗ ಯಾರೂ ಎಡಗಣ್ಣಿನಿಂದ ನೋಡುವಂತಿಲ್ಲ. ಆಕೆಯ ಕೀರ್ತಿ ದೂರ ಪಸರಿಸಿತು. ಮೊಗಲರ ಮೇಲಿನ ವಿಜಯವು ಆ ಕೀರ್ತಿಯ ಕಳಸವಾಯಿತು. ಧರ್ಮದಲ್ಲಿ ಆಸಕ್ತಿ, ರಾಜಕೀಯದಲ್ಲಿ ಚತುರತೆ, ಸಾಮಾಜಿಕದಲ್ಲಿ ದಯೆ, ಸಹನೆ, ಸಹಾಯ, ಸಹಕಾರ ಈ ಉಜ್ವಲ ಸದ್ಗುಣಗಳು ತೊಳಗಿ ಬೆಳಗಿದವು. ರಾಜ್ಯದ ಜನರಿಗೆ ಮಾತೃದೇವತೆಯಾದಳು.

ಚೆನ್ನಮ್ಮಾಜಿ ಬದುಕಿರುವ ವರೆಗೆ ಇನ್ನು ಮುಂದಿನ ಆರೆಂಟು ವರ್ಷಗಳ ಆಳ್ವಿಕೆ ಸುಖಸಮೃದ್ಧಿಯಿಂದ ಕೂಡಿತ್ತು. ಒಡೆತನಕ್ಕೂ ಸುಖ, ಪ್ರಜಾಸಮುದಾಯಕ್ಕೂ ಸುಖ! ಒಮ್ಮೆ ಮೈಸೂರವರ ಕಿರುಕದಾಳಿಯನ್ನು ಹಿಂದೆಗೆಸಿದ್ದನ್ನು ಬಿಟ್ಟರೆ ಎಲ್ಲಿಯೂ ಯುದ್ಧಪ್ರಸಂಗ ಬರಲಿಲ್ಲ. ಶಾಂತಿ-ಸುವ್ಯವಸ್ಥೆಗಳು ಆಡಳಿತದ ಮುಖ್ಯಾಂಗವಾಗಿಬಿಟ್ಟಿದ್ದವು. ಆಡಳಿತ ಯಂತ್ರವು ಸುಸೂತ್ರವಾಗಿ ಸಾಗಿದೆ. ಅಧಿಕಾರಿಗರಲ್ಲಿ ಅಸೂಯೆ, ಅಸಮಾಧಾನಗಳಿಲ್ಲ. ಆಲಸ್ಯ, ಭ್ರಷ್ಟಾಚಾರಗಳು ಕಾಣದಾಗಿವೆ. ಚೆನ್ನಮ್ಮಾಜಿ ದಿನಕ್ಕೊಮ್ಮೆ ಚಾವಡಿಗೆ ಹೋಗಿ ಪರಿಶೀಲಿಸಿ ಬಂದರಾಯಿತು. ತನ್ನ ಧರ್ಮಾಸಕ್ತಿಯಂತೆ ಕಾರ್ಯ ಮಾಡಲು ಸಾಕಷ್ಟು ಅವಕಾಶ!

ಬಿದನೂರು ಬಳಿಯ ನೀಲಕಂಠೇಶ್ವರ ದೇವಸ್ಥಾನಕ್ಕೆ ಸುಂದರವಾದ ರಥವನ್ನು ನಿರ್ಮಿಸಿಕೊಟ್ಟು ರಥೋತ್ಸವವು ಪ್ರತಿವರ್ಷ ನಡೆಯುವಂತೆ ಕಟ್ಟಳೆ ಮಾಡಿದಳು.

ಕೆಳದಿಯ ರಾಮೇಶ್ವರ, ವೀರಭದ್ರೇಶ್ವರ, ಕೊಲ್ಲೂರ ಮೂಕಾಂಬಿಕಾ ದೇವಸ್ಥಾನಗಳಿಗೆ ವಿಶೇಷ ಭೂಸ್ವಾಸ್ಥ್ಯಗಳನ್ನು ನೀಡಿ ಅವುಗಳ ಪೂಜಾ ಕಾರ್ಯಗಳು ವೈಭವದಿಂದ ನಿರ್ವಿಘ್ನವಾಗಿ ನಡೆಯುವಂತೆ ಮಾಡಿದಳು. ಕೆಳದಿಯ ವೀರಭದ್ರದೇವರ ಶಿಲಾಮಂಟಪ, ರಂಗಮಂಟಪ, ಭೋಗ ಮಂಟಪ, ಧ್ವಜಸ್ತಂಭಗಳ ಕಾರ್ಯವನ್ನು ಪೂರ್ಣಗೊಳಿಸಿದಳು.

ರಾಣಿ, ಎಲ್ಲ ಮತ ಪಂಥಗಳ ಧಾರ್ಮಿಕ ನಂಬಿಕೆಗಳನ್ನು ಗೌರವಿಸುತ್ತಿದ್ದಳು. ಭೇದಭಾವವಿಲ್ಲದೆ ಎಲ್ಲ ಮತಗಳ ಪವಿತ್ರ ಸ್ಥಾನಗಳಿಗೆ ಭೂದಾನ ಮಾಡಿ ಸ್ಥಿರ ಶಾಸನ ಮಾಡಿಸಿದಳು. ಶೃಂಗೇರಿ ಪೀಠಕ್ಕೆ ಮತ್ತಿಷ್ಟು ಉಂಬಳಿ ಹಾಕಿಕೊಟ್ಟಳು. ಕಾಶಿ, ರಾಮೇಶ್ವರ, ಶ್ರೀಶೈಲ, ತಿರುಪತಿ ಮುಂತಾದ ಪುಣ್ಯ ಕ್ಷೇತ್ರಗಳಿಗೆ ವರ್ಷಾಶನ ಗೊತ್ತುಮಾಡಿ ಸ್ಥಿರವಾಗಿ ನಡೆಯುವಂತೆ ಕಟ್ಟಳೆ ರಚಿಸಿ ಕೊಟ್ಟಳು. ಉಚಿತ ಸ್ಥಳಗಳಲ್ಲಿ ಮಠಗಳನ್ನು ಕಟ್ಟಿಸಿ, ಶಿವ ಜಂಗಮಾರ್ಥ ಶಿವಾರ್ಪಿತ ಮಾಡಿದಳು. ಶೈವ, ವೈಷ್ಣವ ಬ್ರಾಹ್ಮಣ ದೇವಸ್ಥಾನಗಳಿಗೆ, ಅಗ್ರಹಾರಗಳಿಗೆ ವಿಪುಲ ವಿತ್ತ-ಸೊತ್ತುಗಳ ದಾನ ಮಾಡಿದಳು.

ಯುವರಾಜ ಬಸಪ್ಪನಾಯಕನ ದ್ವಿತೀಯ ಪತ್ನಿ ಚೆನ್ನಬಸವಮ್ಮಾಜಿ ಶಾ. ಶ. ೧೬೧೪ (ಕ್ರಿ. ಶ. ೧೬೯೨) ಕಾರ್ತಿಕ ಶು. ೧೦ ರಂದು ಗಂಡುಮಗುವನ್ನು ಹೆತ್ತಳು. ಈ ಹರ್ಷದ ಸಮಯೋಚಿತವಾಗಿ ಚೆನ್ನಮ್ಮಾಜಿ ತುಂಗಭದ್ರಾ ತೀರದಲ್ಲಿ ಹೊಸ ಅಗ್ರಹಾರವನ್ನು ರಚಿಸಿ ಆ ನಗರಕ್ಕೆ ಸೋಮಶೇಖರಪುರವೆಂದು ಪತಿಯ ಹೆಸರಿಟ್ಟು ಶ್ರೋತ್ರೀಯ ಬ್ರಾಹ್ಮಣರಿಗೆ ಶಿವಾರ್ಪಿತ ಮಾಡಿದಳು. ಮೊಮ್ಮಗನಿಗೆ ಸೋಮಶೇಖರ ಎಂದು ನಾಮಕರಣ ಮಾಡಿದಳು. ಬಸವಾ ಪಟ್ಟಣದ ಸಮೀಪದಲ್ಲಿ ಹುಲಿಕೆರೆ ಎಂಬ ಸ್ಥಳವಿರುವದು. ಅಲ್ಲಿರುವ ಪ್ರಾಚೀನ ಕೋಟೆಯೊಂದನ್ನು ಹಿಂದೆ ಚಿತ್ರದುರ್ಗದ ನಾಯಕರಿಂದ ವಶಪಡಿಸಿಕೊಳ್ಳಲಾಗಿತ್ತು. ಅದನ್ನೀಗ ಸುಂದರವಾಗಿ ಹೊಸ

ದಾಗಿಸಿ ಭದ್ರಗೊಳಿಸಿ ಅದಕ್ಕೆ 'ಚೆನ್ನಗಿರಿ' ಅಂದರೆ (ಸುಂದರವಾದ ದುರ್ಗ ಕೋಟೆ) ಎಂದು ಹೆಸರಿಟ್ಟಳು. ಅದು ಸಹಜವಾಗಿ ಸ್ವನಾಮಾಂಕಿತವೂ ಆಯಿತು. ಬಿದನೂರು ಚಾವಡಿಯನ್ನು ಭದ್ರವಾಗಿ ಹೊಸದಾಗಿ ಕಟ್ಟಿಸಿದಳು.

ಚೆನ್ನಮ್ಮಾಜಿಗೆ ತನ್ನ ಆತ್ಮವಿಕಾಸ ಸಾಧನೆಗಾಗಿ ಲಿಂಗಪೂಜೆ–ಲಿಂಗ ಧ್ಯಾನಗಳಿಗೂ ಈಗ ಸಾಕಷ್ಟು ವೇಳೆ ಇದೆ. ಅಧ್ಯಾತ್ಮಶಾಸ್ತ್ರದ ವ್ಯಾಸಂಗದಲ್ಲಿದ್ದ ಯುವರಾಜ ಬಸವಪ್ಪನಾಯಕನು ತಾಯಿಯೊಡನೆ ಅನುಭಾವಗೋಷ್ಠಿ ನಡೆಸುವನು.* ಶರಣರ, ನಿಜಗುಣರ ದಿವ್ಯಜ್ಞಾನದಲ್ಲಿ ವಿಹರಿಸುವಾಗ ಆಕೆಗೆ ಅಮೃತಾನಂದ; ಮಗನ ಹೃದಯದಲ್ಲಿಯ ಬೆಳಕು ತಾಯಿಯ ಅಂತರಂಗವನ್ನು ಬೆಳಗುತ್ತಿತ್ತು.

ಚೆನ್ನಮ್ಮಾಜಿ ಸದ್ಭಾವ ಸಂಪನ್ನನಾದ ಸುತನೊಡನೆ ಶಿವಪ್ರಸಾದ ಭೋಜನಮಾಡಿ, ಸಂತೋಷಪಡುವಳು, ವಿರಾಮ ಹೊಂದುವಳು. ರಾಜಭವನದ ರತ್ನದೀಪವಾಗಿ ತನ್ನ ವಂಶದ ಕುಡಿಯಾಗಿ ದಟ್ಟಡಿಗಳಿಂದ ಅಲೆದಾಡುವ ಪುಟ್ಟ ಮೊಮ್ಮಗ ಸೋಮಶೇಖರನನ್ನು ಸೆಳೆದು ಅಪ್ಪಿ ಮುದ್ದಿಸಿ, ಅಜ್ಜಿಯ ಮುಗ್ಧಾನಂದವನ್ನೂ ಅನುಭವಸುವಳು.

ಹೀಗೆ ಲೌಕಿಕವಾಗಿ ಪ್ರಜಾಪ್ರೀತಿ, ಪರಿವಾರದ ಓಲಯಿಕೆ, ಸೊಸೆಯಂದಿರ ಅಕ್ಕರೆಯ ಉಪಚಾರ ಸೌಖ್ಯ, ಮಗನ–ಮೊಮ್ಮಗನ ಅಭಿವೃದ್ಧಿ ಇವುಗಳ ಬೆಳಕು! ಪಾರಮಾರ್ಥಿಕವಾಗಿ ಅಂತರಂಗದಲ್ಲಿ ಸತ್ಕ್ರಿಯೆಗಳ ಇಚ್ಛೆ,

---

* ಮುಂದೆ ಕ್ರಿ. ಶ. ೧೬೯೭ರ ರಿಂದ ೧೭೧೪ರ ವರೆಗೆ ರಾಜ್ಯವಾಳಿದ ಈ (ಹಿರಿಯ) ಬಸವಪ್ಪನಾಯಕನು ಶಿವತತ್ವರತ್ನಾಕರ, ವೀರಶೈವಸಂಜೀವಿನೀ, ಸುಭಾಷಿತ ಸುರದ್ರುಮ, ಸೂಕ್ತಿಸುಧಾಕರ ಎಂಬ ನಾಲ್ಕು ಸಂಸ್ಕೃತ ಗ್ರಂಥಗಳನ್ನು ರಚಿಸಿದ್ದಾಗಿ ತಿಳಿಯುತ್ತದೆ. ಮಂತ್ರಿ ಷಡಕ್ಷರಯ್ಯನ ವೀರಶೈವಧರ್ಮಶಿರೋಮಣಿ, ಸಂಗಮೇಶ್ವರನ ಶಿವಸಹಸ್ರನಾಮ ವ್ಯಾಖ್ಯಾನ, ಮರಿತೋಂಟದಾರ್ಯನ ವೀರಶೈವಾನಂದಚಂದ್ರಿಕೆ ಮುಂತಾದವು ಇವನ ಪ್ರೋತ್ಸಾಹದಿಂದಲೇ ಬರೆಯಲ್ಪಟ್ಟವು. ಈ ದೊರೆ ಪಂಡಿತರಿಗೆ, ಕವಿಗಳಿಗೆ ಪ್ರೋತ್ಸಾಹಕನೂ, ಪೋಷಕನೂ ಆಗಿದ್ದುದರಿಂದ 'ಸೂರಿನಿಕರಕಲ್ಪದ್ರುಮ'ನೆಂದು ಹೊಗಳಿಸಿಕೊಂಡಿದ್ದಾನೆ.

ಜ್ಞಾನ–ಭಕ್ತಿ ಇವುಗಳ ಬೆಳಕು! ಸಂಪೂರ್ಣ ಸಾರ್ಥಕವಾದುದು ಚೆನ್ನಮ್ಮಾಜಿಯ ಜೀವನ!

ವೀರರಾಣಿ ಚೆನ್ನಮ್ಮಾಜಿಯ ವ್ಯಕ್ತಿತ್ವದ ಹಿರಿಮೆಯನ್ನು ಕುರಿತು ಲಿಂಗಕವಿ ಹೃದಯದುಂಬಿ ಹಾಡಿ ಹೊಗಳಿದ ಮುತ್ತಿನಂತಹ ಸಾಲುಗಳಿವು. ಕನ್ನಡಿಗರ ನಾಲಿಗೆಗಳ ಮೇಲೆ ಸದಾ ನಲಿಯುವಂತಹವು.

ಉನ್ನತ ಶುಭಗುಣಗಣ ಸಂ–
ಪನ್ನತೆಯಿಂ ಕ್ಷಾತ್ರದಾನಧರ್ಮಾದಿಗಳಿಂ
ಚೆನ್ನಮ್ಮಾಜಿಗೆ ಸರಿಯಹ
ಮನ್ನೆಯರಿಲ್ಲೆನಿಸಿ ರಾಜ್ಯಮಂ ರಕ್ಷಿಸಿದಳ್

'ಕೆಳದಿ ನೃಪವಿಜಯಂ, ಪು. ೧೬೯'

ಈ ದೊಡ್ಡತಾಯಿ ಎಲ್ಲಿಯೋ ಚಿಕ್ಕ ಪಯಣದಲ್ಲಿರುವಾಗ ಶೀತಗಾಳಿ ಬಡಿದು ಶೀತಬಾಧೆಯಾಯಿತು. ಜ್ವರ ಬಂದವು, ಹೆಚ್ಚಾದವು, ಶಿವನಾಜ್ಞೆಯಾಯಿತು. ಶಕೆ. ೧೬೨೦ ಶ್ರಾವಣ ಶು. ೧೦ (ಕ್ರಿ. ಶ. ೧೬೯೮ ಆಗಷ್ಟ) ಅಂದು ಈ ಮಹಾಜೀವ, ಮಹಾದೇವನಲ್ಲಿ ವಿಲಯವಾಯಿತು. ಆಗ ವಯಸ್ಸು ಸುಮಾರು ೫೮ ವರ್ಷ. ಪಟ್ಟಾಧಿಕಾರ ಹೊಂದಿ ರಾಜ್ಯವಾಳಿದ ಅವಧಿ ೨೫ ವರ್ಷ ೪ ತಿಂಗಳು ೨೦ ದಿವಸ.

ಕೆಳದಿಯ ರಾಜ್ಯವು ವಿಜಯನಗರದ ಅಂಕಿತದಲ್ಲಿ ಉದಯವಾದರೂ ಆ ಸಾಮ್ರಾಜ್ಯ ಅಳಿದ ಮೇಲೆ ಇದು ಸುಮಾರು ೨೦೦ ವರ್ಷ ಸ್ವತಂತ್ರವಾಗಿ ಬಾಳಿತು. ಕೆಳದಿಯ ರಾಜ್ಯವನ್ನು ಆಳಿದ ೧೮ ಮಂದಿ ರಾಜರಲ್ಲಿ ಸದಾಶಿವ ನಾಯಕ, ಹಿರಿಯ ವೆಂಕಟಪ್ಪನಾಯಕ ಇವರಿಬ್ಬರನ್ನು ಬಿಟ್ಟರೆ, ಚೆನ್ನಮ್ಮಾಜಿಯೇ ಉಳಿದವರಿಗಿಂತ ಹೆಚ್ಚುಕಾಲ ರಾಜ್ಯವಾಳಿದಳು.

ದೇಶದಲ್ಲಿ ರಾಜಕೀಯ ಕೋಲಾಹಲವಿರುವ ಕಾಲದಲ್ಲಿ, ಅತಿ ಕ್ಲಿಷ್ಟಕರವಾದ ಹಲವು ಸಮಸ್ಯೆಗಳ ಮಧ್ಯದಲ್ಲಿ, ಇಪ್ಪತ್ತೈದು ವರ್ಷಕ್ಕೆ ಮಿಕ್ಕಿದ ದೀರ್ಘಕಾಲ, ಒಂದು ಸ್ವತಂತ್ರ ರಾಜ್ಯವನ್ನು ಕುಂದಿಲ್ಲದೆ ಆಳಿದ ಮಹಿಳೆ ಭಾರತದಲ್ಲಿ ಚೆನ್ನಮ್ಮಾಜಿಯೊಬ್ಬಳಲ್ಲದೆ ಮತ್ತೊಬ್ಬಳಿಲ್ಲ. ಇದು ಕನ್ನಡಿಗರಿಗೆ, ವಿಶೇಷವಾಗಿ ಕನ್ನಡ ಸೋದರಿಯರಿಗೆ ಅಭಿಮಾನದ ಮಾತಲ್ಲವೆ?



# ಅನುಬಂಧ

## ಕೆಳದಿ ರಾಜ್ಯದ ರಾಜಮಾಲಿಕೆ

| ಅರಸರು ಮತ್ತು ಸಂಬಂಧಸೂಚಿ | ಆಳಿದ ಅವಧಿ ಕ್ರಿ. ಶ. ವರ್ಷ |
|---|---|
| ೧. ಚೌಡಪ್ಪ ನಾಯಕ<br>ಪಳ್ಳಿಯಲ್ಲು, ಗ್ರಾಮದ ಕೃಷಿಕನಾದ<br>ಬಸವಪ್ಪನ ಮಗನು | ೧೫೦೦–೧೫೧೪ |
| ೨. ಸದಾಶಿವರಾಯ ನಾಯಕ<br>ಚೌಡಪ್ಪನಾಯಕನ ಮಗನು | ೧೫೧೪–೧೫೪೬ |
| ೩. ದೊಡ್ಡ ಸಂಕಣ್ಣನಾಯಕ<br>ಸದಾಶಿವರಾಯನಾಯಕನ ಹಿರಿಯಮಗ | ೧೫೪೬–೧೫೫೯ |
| ೪. ಚಿಕ್ಕ ಸಂಕಣ್ಣನಾಯಕ<br>ಸದಾಶಿವರಾಯನಾಯಕ ಎರಡನೆಯ ಮಗ<br>ಅಣ್ಣನ ಮಗ ರಾಮರಾಜನಿಂದ ಹತನಾದನು | ೧೫೫೯–೧೫೭೦ |
| ೫. ರಾಮರಾಜನಾಯಕ<br>ದೊಡ್ಡ ಸಂಕಣ್ಣನಾಯಕನ ಹಿರಿಯ ಮಗ | ೧೫೭೦–೧೫೮೩ |
| ೬. ಹಿರಿಯ ವೆಂಕಟಪ್ಪನಾಯಕ<br>ದೊಡ್ಡ ಸಂಕಣ್ಣನಾಯಕನ ಎರಡನೆಯ ಮಗ | ೧೫೮೩–೧೬೨೯ |
| ೭. ವೀರಭದ್ರನಾಯಕ<br>ಹಿರಿಯ ವೆಂಕಟಪ್ಪನಾಯಕನ ಮೊಮ್ಮಗ | ೧೬೩೦–೧೬೪೬ |
| ೮. ಶಿವಪ್ಪನಾಯಕ<br>ಚಿಕ್ಕ ಸಂಕಣ್ಣನಾಯಕನ ಮೊಮ್ಮಗ<br>ವೀರಭದ್ರನಾಯಕನಿಗೆ ಚಿಕ್ಕನಾಗುವವನಾದರೂ<br>ಅವನಿಗಿಂತ ಚಿಕ್ಕವ | ೧೬೪೬–೧೬೬೧ |

೯. ವೆಂಕಟಪ್ಪನಾಯಕ — ೧೬೬೧-೧೬೬೨
ಚಿಕ್ಕ ಸಂಕಣ್ಣನಾಯಕ ೨ನೆಯ ಮೊಮ್ಮಗ
ಶಿವಪ್ಪನಾಯಕನ ತಮ್ಮ, ಅಣ್ಣನ ಮಗನಾದ
ಭದ್ರಪ್ಪನ ಸಲುವಾಗಿ ಕೊಲ್ಲಲ್ಪಟ್ಟನು

೧೦. ಭದ್ರಪ್ಪನಾಯಕ — ೧೬೬೨-೧೬೬೫
ಶಿವಪ್ಪನಾಯಕನ ಹಿರಿಯ ಮಗ
(ಸಂದೇಹಾಸ್ಪದ ದೇಹಾವಸಾನ)

೧೧. ಸೋಮಶೇಖರನಾಯಕ — ೧೬೬೫-೧೬೭೨
ಶಿವಪ್ಪನಾಯಕನ ೨ನೆಯ ಮಗ
ಕಾಳಗದಲ್ಲಿ ಮೋಸದ ಇರಿತದಿಂದ
ಹತನಾದ

೧೨. ಕುತ್ಸಿತ ಶಿವಪ್ಪನಾಯಕ — ೧೬೭೨ ಡಿಶಂಬರದಿಂದ
ವೀರಭದ್ರನಾಯಕನ ಸೋದರಳಿಯನಾದ — ೧೬೭೩ ಮಾರ್ಚದವರೆಗೆ
ವೆಂಕಟಯ್ಯನ ದಾಸೀಪುತ್ರ

೧೩. ಚೆನ್ನಮ್ಮಾಜಿ — ೧೬೭೩-೧೬೯೮
ಸೋಮಶೇಖರನಾಯಕನ ಪತ್ನಿ

೧೪. ಹಿರಿಯ ಬಸವಪ್ಪನಾಯಕ — ೧೬೯೮-೧೭೧೫
ಚೆನ್ನಮ್ಮಾಜಿಯ ದತ್ತಪುತ್ರ

೧೫. ಸೋಮಶೇಖರನಾಯಕ — ೧೭೧೫-೧೭೪೦
ಹಿರಿಯ ಬಸವಪ್ಪನಾಯಕನ ಮಗ

೧೬. ಬಸವಪ್ಪನಾಯಕ — ೧೭೪೦-೧೭೫೫
ಸೋಮಶೇಖರನಾಯಕನ ತಮ್ಮನಾದ
ವೀರಭದ್ರಪ್ಪನ ಮಗ

೧೭. ಚೆನ್ನಬಸವ ನಾಯಕ — ೧೭೫೫-೧೭೫೮
ಬಸವಪ್ಪನಾಯಕನ ದತ್ತಕ ಮಗ

೧೮. ಸೋಮಶೇಖರನಾಯಕ ೧೭೫೮–೧೭೭೩
ಬಸವಪ್ಪನಾಯಕನ ೨ನೆಯ ದತ್ತಕ ಮಗ
ಮತ್ತೊಬ್ಬ ಪತ್ನಿಯಿಂದ ಸ್ವೀಕಾರ

ಮೈಸೂರಿನ ಹೈದರಅಲಿಯಿಂದ ಕೆಳದಿ ರಾಜ್ಯದ ಮುಕ್ತಾಯ



## ಶ್ರೀ ಲಕ್ಕಪ್ಪ ಶಿರಹಟ್ಟಿ ಅವರ ಕೃತಿಗಳು

**ಕಾವ್ಯ :**

೧) ನೀತಿ ಮುಕ್ತಾವಲಿ (ನೈತಿಕ ಖಂಡಕಾವ್ಯ)

೨) ನೂರೊಂದು ನೆಲೆಯ ನಿಲವು (ಷಟ್‌ಸ್ಥಲ ಕಾವ್ಯ)

೩) ಲಿಂಗರಾಜ ವಿಜಯ (ಚಾರಿತ್ರಿಕ ಕಾವ್ಯ)

**ಐತಿಹಾಸಿಕ ಕೃತಿಗಳು :**

೪) ಚಿತ್ತೂರಿನ ಪುನರುದ್ಧಾರ (ಕತೆ)

೫) ಕನ್ನಡಿಗನ ಕಲಿತನ (ನಾಟಕ)

೬) ಬಯಲಾದ ಸಂಚು (ನೀಳ್ಗತೆ)

೭) ಬಸವನ ಬಾಗೇವಾಡಿಯ ಕ್ಷೇತ್ರದರ್ಶನ

೮) ಕೆಳದಿಯ ಚೆನ್ನಮ್ಮ (ಚರಿತ್ರೆ)

**ಮಹಾತ್ಮರ ಜೀವನಚರಿತ್ರೆಗಳು :**

೯) ಶ್ರೀ ಸಿದ್ಧರಾಮೇಶ್ವರ ಚರಿತ್ರೆ

೧೦) ಯೋಗಿರಾಜ ವಿಜಯ

೧೧) ಬಸವರಾಜ ದೇವರು

೧೨) ಕ್ರಾಂತಿ ಗಂಗೋತ್ರಿ

೧೩) ಕಾಯಕ ವೀರ

೧೪) ಧರ್ಮದರ್ಶಿ

೧೫) ಬಯಲ ಮೂರ್ತಿ

**ಅನುವಾದ :**

೧೬) ಶಿವಾದ್ವೈತ ಸಿದ್ಧಾಂತ